KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೧, ೨೦೦೭ (ಕಾರ್ತಿಕ ೧೦, ಶಕ ವರ್ಷ ೧೯೨೯) | ಸಂಚಿಕೆ ೪೩ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
### ಪ್ರಕಟಣೆ
### ಸಂಖ್ಯೆ: ಎಇಇ(ಕ)/ ಟಿ–87

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:

**ಕೆಲಸದ ಹೆಸರು:** ಉದ್ದೇಶಿತ ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಬೂವನಹಳ್ಳಿ (ದಂಡಿಗನಹಳ್ಳಿಯ ಹತ್ತಿರ) ನಿರ್ಮಾಣವಾಗುತ್ತಿರುವ ಕಾರಣ ಹಾಲಿ ಇರುವ 220 ಕೆವಿ ಶಿವಮೊಗ್ಗ–ಮೈಸೂರು ದ್ವಿ–ವಿದ್ಯುತ್ ಮಾರ್ಗವನ್ನು ಸ್ಥಳಾಂತರಿಸಲಾಗುವುದು.

**ಉದ್ದೇಶ:** ವ್ಯವಸ್ಥೆಯ ಸುಧಾರಣೆ.

**ಹಾದುಹೋಗುವ ಪ್ರದೇಶ:** ದಂಡಿಗನಹಳ್ಳಿ, ಕಾರೆಕೆರೆ, ಜುಂಜನಹಳ್ಳಿ, ಹೋಳಲು, ದೇವಿಹಳ್ಳಿ, ಶಾಂತಿಗ್ರಾಮ, ರಂಗನಾಥಪುರ, ಉಪ್ಪರಹೊಸಹಳ್ಳಿ, ತ್ಯಾವಿಹಳ್ಳಿ, ದೊಡಗೇಣಿಗೆರೆ, ಚಿಕ್ಕಗೇಣಿಗೆರೆ, ಕಸ್ತೂರಹಳ್ಳಿ, ಬಸನಹಳ್ಳಿ.

**ಅಂದಾಜು ವೆಚ್ಚ:** ರೂ. 1022.00 ಲಕ್ಷಗಳು.

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13)ರಲ್ಲಿ ಭಾಗ–3ರ ಅಡಿಯಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಒಂದು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃ.ಕಾ.ವಿಭಾಗ, ಕವಿಪ್ರನಿನಿ., ಹಾಸನ.

ಪಿ.ಡಿ.117

**FORM NO.155**

**(RULE 329)**

**MEMBERS VOLUNTARY WINDING UP**

**Metro Optix (India) Private Ltd., (Under members Voluntary winding up) Regd Office No.11 (5/2 Old No) Aga Abbas Ali Road, Ulsoor, Bangalore-560 047**

**NOTICE CONVENING FINAL MEETING**

Notice is hereby given in pursuance of Sec.497 Companies Act, that a General Meeting of the members of the above named company will be held at the registered office of the company, at 11 AM on

the 24th day of November 2007, for the purpose of having an account laid before them showing the manner in which the winding up has been conducted and the property of the company disposed of and of hearing any explanation that may be given by the liquadator and also of determining by a special resolution of the company, the manner in which the books, accounts and documents of the company and of the liquadator shall be disposed of.

Dated this 22nd day of October, 2007

**A.G. SIRSI**
Voluntary Liquadator.

PD-118

## ವಾಣಿಜ್ಯ ತೆರಿಗೆ ಆಯುಕ್ತರ ಕಛೇರಿಯ ನಡವಳಿಗಳು

**ವಿಷಯ:** ವಾಣಿಜ್ಯ ತೆರಿಗೆ ಇಲಾಖೆಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳ ಪುನರ್ ವಿಂಗಡಣೆ, ಸ್ಥಳಾಂತರ ಮತ್ತು ಪುನರ್ ವ್ಯವಸ್ಥೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಆಇ 121 ವಾತೆಸಿ 94, ದಿನಾಂಕ:04.02.1995.
2) ಸರ್ಕಾರದ ಆದೇಶ ಸಂಖ್ಯೆ: ಆಇ 36 ವಾತೆಇ 2005, ದಿನಾಂಕ:31.03.2005.

**ಪ್ರಸ್ತಾವನೆ:**

ವಾಣಿಜ್ಯ ತೆರಿಗೆ ಇಲಾಖೆಯು ದಿನಾಂಕ:01.04.2005 ರಿಂದ ಜಾರಿಗೆ ಬರುವಂತೆ ಮೌಲ್ಯವರ್ಧಿತ ತೆರಿಗೆಯನ್ನು ಜಾರಿಗೆ ತಂದಿದ್ದು, ಉಲ್ಲೇಖ (2)ರ ಆದೇಶ ಮುಖೇನ ಬೆಂಗಳೂರು ನಗರದಾದ್ಯಂತ 16 ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ನಿಯೋಜಿಸಿ ಒಟ್ಟಾರೆ 1,50,930 ನೋಂದಾಯಿತ ವರ್ತಕರನ್ನು ನಿರ್ವಹಿಸುವ ಕೆಲಸವನ್ನು ನಿಗದಿಪಡಿಸಲಾಯಿತು. ಈ ವ್ಯಾಪ್ತಿಯಲ್ಲಿ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ ಸರಾಸರಿ 8,000 ದಿಂದ 10,000 ನೋಂದಾಯಿತ ವರ್ತಕರು ಇದ್ದು, ಎಲ್ಲಾ ವರ್ತಕರು ಸಮರ್ಪಕವಾಗಿ ಮಾಸಿಕ/ ತ್ರೈಮಾಸಿಕ ನಮೂನೆ ನೀಡುತ್ತಿರುವರೇ, ಹಾಗೂ ತೆರಿಗೆ ಪಾವತಿಸುತ್ತಿರುವರೇ ಹಾಗೂ ನೀಡಿದ ಚೆಕ್ಕುಗಳು ಹಣ ಪಾವತಿಯಾಗದೆ ಹಿಂತಿರುಗಿಸಿದ ಪ್ರಕರಣಗಳಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲಾಗಿದೆಯೇ ಎಂಬುದರ ಬಗ್ಗೆ ನಿಗಾವಹಿಸಬೇಕಾಗುತ್ತದೆ. ಅದಲ್ಲದೆ, ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗಳಲ್ಲಿ ಬೆಂಗಳೂರಿನ ಎಲ್ಲಾ ಬಡಾವಣೆಗಳ ನೋಂದಾಯಿತ ವರ್ತಕರು ಬರುತ್ತಿದ್ದು, ಅವುಗಳ ಮೇಲಿನ ಉಸ್ತುವಾರಿಯನ್ನು ನಿರ್ವಹಿಸಲು ಸಾಧ್ಯವಾಗುತ್ತಿರಲಿಲ್ಲ ಹಾಗೂ ನೋಂದಾಯಿತರಲ್ಲದ ವರ್ತಕರನ್ನು ತೆರಿಗೆ ವ್ಯಾಪ್ತಿಯಲ್ಲಿ ತರಲು ಸಾಧ್ಯವಾಗಿರಲಿಲ್ಲ. ಈ ಎಲ್ಲಾ ನ್ಯೂನತೆಗಳು ರಾಜ್ಯದ ರಾಜಸ್ವ ಸಂಗ್ರಹಣೆಯ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತಿರುವುದು.

ಈ ಹಿನ್ನೆಲೆಯಲ್ಲಿ ಮೇಲ್ಕಂಡ ನ್ಯೂನತೆಗಳನ್ನು ಸರಿಪಡಿಸಿದಲ್ಲಿ ರಾಜ್ಯದ ರಾಜಸ್ವ ಸಂಗ್ರಹಣೆಯ ಬೆಳವಣಿಗೆಯಲ್ಲಿ ತೀವ್ರವಾದ ಏರಿಕೆಯನ್ನು ತರಬಹುದೆಂಬ ಉದ್ದೇಶದಿಂದ ಹಾಗೂ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಯ ಕಾರ್ಯವ್ಯಾಪ್ತಿಯಲ್ಲಿ ಬರುವ ವರ್ತಕರನ್ನು ಭೌಗೋಳಿಕ ವ್ಯಾಪ್ತಿಯೊಳಗೆ ತಂದಲ್ಲಿ ಸೀಮಿತ ನೋಂದಾಯಿತ ವರ್ತಕರ ಸಂಖ್ಯೆ ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗೆ ಲಭ್ಯವಾಗುವುದರಿಂದ ಪ್ರತಿ ವರ್ತಕರ ವ್ಯವಹಾರವನ್ನು ಗಮನಿಸಬಹುದಾಗಿದ್ದು, ನೀಡುವ ಮಾಸಿಕ/ ತ್ರೈಮಾಸಿಕ ನಮೂನೆಗಳನ್ನು ಪಾವತಿಸುವ ತೆರಿಗೆ ಹೂಡವಳಿ ತೆರಿಗೆಯ ಪೂರ್ಣ ವಿವರಗಳನ್ನು ಪರಿಶೀಲಿಸಬಹುದಾದ್ದರಿಂದ ತೆರಿಗೆ ವಂಚನೆಯನ್ನು ತಡೆಹಿಡಿಯಬಹುದಾಗಿದೆ. ಇದರಿಂದ ರಾಜ್ಯದ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಬೆಂಗಳೂರು ನಗರದಲ್ಲಿರುವ 16 ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ಭೌಗೋಳಿಕ ವ್ಯಾಪ್ತಿಯಲ್ಲಿ ಅಂಚೆ ಪಿನ್‌ಕೋಡ್ ಆಧಾರದ ಮೇಲೆ ಹಾಗೂ ಬೆಂಗಳೂರಿನ ಹೊರವಲಯದ ವರ್ತಕರಿಗೆ ತೆರಿಗೆ ಪಾವತಿಸಲು ಸುಲಭವಾಗುವಂತೆ, ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ನೀಡಿದ ಅಧಿಕಾರವನ್ನು ಚಲಾಯಿಸಿ ಪ್ರಸ್ತುತ ಕಛೇರಿಗಳನ್ನು ಪುನರ್ ವಿಂಗಡಣೆಗೊಳಿಸಿ, ಹೊರವಲಯದಲ್ಲಿ 7 ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ಪುನರ್ ವ್ಯವಸ್ಥೆಗೊಳಿಸುವ ಮೂಲಕ ನಗರದಲ್ಲಿ 23 ಕಛೇರಿಗಳನ್ನಾಗಿ ಪರಿವರ್ತನೆಗೊಳಿಸಿ ಕೆಳಕಂಡಂತೆ ಮೌಲ್ಯವರ್ಧಿತ ತೆರಿಗೆ ಕಛೇರಿ ಪುನರ್ ವಿಂಗಡಿಸಲಾಗಿದೆ.

| | |
|---|---|
| 1. | ಎಲ್.ವಿ.ಓ.– 015, ವಿ.ಟಿ.ಕೆ–2, ಕೋರಮಂಗಲ |
| 2. | ಎಲ್.ವಿ.ಓ.– 025, ವಿ.ಟಿ.ಕೆ–2, ಕೋರಮಂಗಲ |
| 3. | ಎಲ್.ವಿ.ಓ.– 035, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ |
| 4. | ಎಲ್.ವಿ.ಓ.– 045, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ |
| 5. | ಎಲ್.ವಿ.ಓ.– 055, ಬಿ.ಡಿ.ಎ. ಕಾಂಪ್ಲೆಕ್ಸ್, ಹೆಚ್.ಆರ್.ಬಿ.ಆರ್. ಲೇಔಟ್, ಕಲ್ಯಾಣನಗರ |
| 6. | ಎಲ್.ವಿ.ಓ.– 065, ಪಿ.ಐ.ಎ. ಸಂಕೀರ್ಣ, ಪೀಣ್ಯ. |
| 7. | ಎಲ್.ವಿ.ಓ.– 075, ಪಿ.ಐ.ಎ. ಸಂಕೀರ್ಣ, ಪೀಣ್ಯ. |

ಈ ರೀತಿಯಾಗಿ ಮರುವಿಂಗಡಣೆಗೊಳಿಸಿದ ಎಲ್ಲಾ 23 ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಭೌಗೋಳಿಕ ಆಧಾರವನ್ನಾಗಿ ಅಂಚೆ ಪಿನ್‌ಕೋಡ್ ಸಂಖ್ಯೆಗಳನ್ನು ನೀಡಲು ನಿರ್ಧರಿಸಲಾಗಿದೆ. ಇವುಗಳ ವಿವರಗಳು ಕೆಳಕಂಡಂತಿವೆ.

| ಕ್ರ. ಸಂ. | ಎಲ್.ವಿ.ಓ. ಕಛೇರಿಯ ವಿಳಾಸ | ಅಂಚೆ ಪಿನ್ ಕೋಡ್ ಸಂಖ್ಯೆ |
|---|---|---|
| 1. | ಎಲ್.ವಿ.ಓ.–010, ವಿ.ಟಿ.ಕೆ.–1, ಗಾಂಧಿನಗರ. | 560009, 560051, 560053 |
| 2. | ಎಲ್.ವಿ.ಓ.–020, ವಿ.ಟಿ.ಕೆ.–1, ಗಾಂಧಿನಗರ. | 560053, 560002 |
| 3. | ಎಲ್.ವಿ.ಓ.–030, ವಿ.ಟಿ.ಕೆ.–1, ಗಾಂಧಿನಗರ. | 560002 |
| 4. | ಎಲ್.ವಿ.ಓ.–040, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560025, 560027, 560051, 560052 |
| 5. | ಎಲ್.ವಿ.ಓ.–050, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560079, 560086, 560096 |
| 6. | ಎಲ್.ವಿ.ಓ.–060, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560056, 560059, 560060, 560074, 560039, 560091, 560072. |
| 7. | ಎಲ್.ವಿ.ಓ.–070, ವಿ.ಟಿ.ಕೆ.–1, ಗಾಂಧಿನಗರ. | 560026, 560040, 560023 |
| 8. | ಎಲ್.ವಿ.ಓ.–080, ವಿ.ಟಿ.ಕೆ.–1, ಗಾಂಧಿನಗರ. | 560001, 560042, 560008 |
| 9. | ಎಲ್.ವಿ.ಓ.–090, ದೇವತಾ ಮ್ಯಾನ್‌ಸನ್, ಗಾಂಧಿನಗರ. | 560011, 560041, 560069, 560082, 560078 |
| 10. | ಎಲ್.ವಿ.ಓ.–100, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560004, 560018, 560019, 560028 |
| 11. | ಎಲ್.ವಿ.ಓ.–110, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560002 |
| 12. | ಎಲ್.ವಿ.ಓ.–120, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560050, 560070, 560085, 560061, 560062, 560077, 560098. |
| 13. | ಎಲ್.ವಿ.ಓ.–130, ಅಭಯ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | 560003, 560020, 560021 |
| 14. | ಎಲ್.ವಿ.ಓ.–140, ರತ್ನಂ ಕಾಂಪ್ಲೆಕ್ಸ್, ಮಲ್ಲೇಶ್ವರಂ. | 560010, 560044, 560012, 560055 |
| 15. | ಎಲ್.ವಿ.ಓ.–150, ಲಕ್ಷ್ಮೀ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | 560006, 560024, 560045, 560046, 560063, 560064, 560065, 560080, 560092, 560094. |
| 16. | ಎಲ್.ವಿ.ಓ.–160, ಲಕ್ಷ್ಮೀ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | ಯಾವುದೇ ಕ್ಷೇತ್ರವ್ಯಾಪ್ತಿ ನೀಡಿರುವುದಿಲ್ಲ. |
| 17. | ಎಲ್.ವಿ.ಓ.–015, ವಿ.ಟಿ.ಕೆ.2, ಕೋರಮಂಗಲ. | 560029, 560030, 560034, 560035, 560047, 560081, 560095 |
| 18. | ಎಲ್.ವಿ.ಓ.–025, ವಿ.ಟಿ.ಕೆ.2, ಕೋರಮಂಗಲ. | 560068, 560076, 560083, 560099, 560100, 562106, 562107, 562145, 562149, 562158, 561229, 561258 |
| 19. | ಎಲ್.ವಿ.ಓ.–035, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ. | 560016, 560036, 560048, 560049, 560066, 560067, 560087, 560093, 562114 |
| 20. | ಎಲ್.ವಿ.ಓ.–045, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ. | 560007, 560017, 560037, 560038, 560071, 560075 |
| 21. | ಎಲ್.ವಿ.ಓ.–055, ಬಿ.ಡಿ.ಎ. ಕಾಂಪ್ಲೆಕ್ಸ್, ಹೆಚ್.ಆರ್.ಬಿ.ಆರ್. ಲೇಔಟ್, ಕಲ್ಯಾಣನಗರ. | 560005, 560032, 560033, 560043, 560084. |
| 22. | ಎಲ್.ವಿ.ಓ.–065, ಪಿ.ಐ.ಎ. ಸಂಕೀರ್ಣ, ಪೀಣ್ಯ. | 560013, 560014, 560015, 560031, 560054, 560057, 560073, 560088, 560089, 560090, 560097, 562123, 562132 |
| 23. | ಎಲ್.ವಿ.ಓ.–075, ಪಿ.ಐ.ಎ. ಸಂಕೀರ್ಣ, ಪೀಣ್ಯ. | 560022, 560058 |

ಈ ಹೊಸದಾಗಿ ಪರಿವರ್ತಿಸಿದ ಕಛೇರಿಗಳಿಗೆ ಸ್ಥಳೀಯವಾಗಿ ಕೆಳಕಂಡ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಸ್ಥಳಾಂತರಿಸಲು ಉದ್ದೇಶಿಸಲಾಗಿದ್ದು ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಹುದ್ದೆಗಳನ್ನು ನಿಯೋಜಿಸಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ. | ವಾ.ತೆ.ಅ. | ವಾ.ತೆ.ಪ. | ಪ್ರ.ದ.ಸ. | ದ್ವಿ.ದ.ಸ. | ಶೀ.ಲಿ. | ಬೆ.ಗಾ. | ಕ.ವ. | 'ಡಿ' ಗ್ರೂಪ್ |
|---|---|---|---|---|---|---|---|---|---|---|
| 1. | ಎಲ್.ವಿ.ಓ-15 | 1 | 1 | 2 | 2 | 6 | 1 | 2 | 2 | 2 |
| 2. | ಎಲ್.ವಿ.ಓ-25 | 1 | 1 | 2 | 2 | 6 | 1 | 2 | 2 | 2 |
| 3. | ಎಲ್.ವಿ.ಓ-35 | 1 | 1 | 2 | 2 | 6 | 1 | 2 | 2 | 2 |
| 4. | ಎಲ್.ವಿ.ಓ-45 | 1 | 1 | 2 | 2 | 6 | 1 | 2 | 2 | 2 |
| 5. | ಎಲ್.ವಿ.ಓ-55 | 1 | 1 | 2 | 2 | 6 | 1 | 2 | 2 | 2 |
| 6. | ಎಲ್.ವಿ.ಓ-65 | 1 | 1 | 2 | 2 | 6 | 1 | 2 | 2 | 2 |
| 7. | ಎಲ್.ವಿ.ಓ-75 | 1 | 1 | 2 | 2 | 6 | 1 | 2 | 2 | 2 |

ಅದಕ್ಕಾಗಿ ಈ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಿಬ್ಬಂದಿ. 3ಸಿ. ಸಿ.ಆರ್.157/ 06-07, ದಿನಾಂಕ:24ನೇ ಮಾರ್ಚ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗನುಗುಣವಾಗಿ ನೋಂದಾಯಿತ ವರ್ತಕರು ಪಾವತಿಸುವ ತೆರಿಗೆ, ಹೂಡುವಳಿ ತೆರಿಗೆ ಮತ್ತು ವ್ಯವಹಾರವನ್ನು ಗಮನಿಸಿ ತೆರಿಗೆ ವಂಚನೆಯನ್ನು ತಡೆಗಟ್ಟಿ ರಾಜ್ಯದ ರಾಜಸ್ವ ಸಂಗ್ರಹಣೆಯ ಹಿತದೃಷ್ಟಿಯಿಂದ ವಾಣಿಜ್ಯ ತೆರಿಗೆ ಇಲಾಖೆಯು ಸರ್ಕಾರದ ಆದೇಶದಲ್ಲಿ ನೀಡಿದ ಅಧಿಕಾರವನ್ನು ಉಪಯೋಗಿಸಿಕೊಂಡು ಪ್ರಸ್ತುತ ಬೆಂಗಳೂರು ನಗರದಲ್ಲಿರುವ 16 ಮೌಲ್ಯವರ್ಧಿತ ತೆರಿಗೆ ಕಛೇರಿಯನ್ನು ಮರು ವಿಂಗಡಣೆ ಮಾಡಿ ಕೆಳಕಂಡ ಸ್ಥಳಗಳಲ್ಲಿ ಹೊಸದಾಗಿ 7 ಮೌಲ್ಯವರ್ಧಿತ ತೆರಿಗೆ ಕಛೇರಿಗಳನ್ನು ಪುನರ್ ವ್ಯವಸ್ಥೆಗೊಳಿಸಲು ನಿರ್ಧರಿಸಿ ಆದೇಶಿಸಿದೆ.

ಈ ಕಛೇರಿಗಳು ದಿನಾಂಕ:01.04.2007 ರಿಂದ ಜಾರಿಗೆ ಬರುವಂತೆ ಪುನರ್ ವಿಂಗಡಣೆ ಮಾಡಿ ಆದೇಶಿಸಿದ್ದೇನೆ.

| | |
|---|---|
| 1. | ಎಲ್.ವಿ.ಓ.- 015, ವಿ.ಟಿ.ಕೆ-2, ಕೋರಮಂಗಲ |
| 2. | ಎಲ್.ವಿ.ಓ.- 025, ವಿ.ಟಿ.ಕೆ-2, ಕೋರಮಂಗಲ |
| 3. | ಎಲ್.ವಿ.ಓ.- 035, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ |
| 4. | ಎಲ್.ವಿ.ಓ.- 045, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ |
| 5. | ಎಲ್.ವಿ.ಓ.- 055, ಬಿ.ಡಿ.ಎ. ಕಾಂಪ್ಲೆಕ್ಸ್, ಹೆಚ್.ಆರ್.ಬಿ.ಆರ್. ಲೇಔಟ್, ಕಲ್ಯಾಣನಗರ |
| 6. | ಎಲ್.ವಿ.ಓ.- 065, ಪಿ.ಐ.ಎ. ಸಂಕೀರ್ಣ, ಪೀಣ್ಯ. |
| 7. | ಎಲ್.ವಿ.ಓ.- 075, ಪಿ.ಐ.ಎ. ಸಂಕೀರ್ಣ, ಪೀಣ್ಯ. |

ಈ ರೀತಿ ಪುನರ್ ವಿಂಗಡಣೆಗೊಳಿಸಲಾದ ಎಲ್ಲಾ 23 ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಅವುಗಳ ಭೌಗೋಳಿಕ ಆಧಾರದ ಮೇಲೆ ಅಂಚೆ ಪಿನ್‌ಕೋಡ್‌ಗಳನ್ನು ನೀಡಲಾಗಿದೆ. ಇವುಗಳ ಸಂಪೂರ್ಣ ಮಾಹಿತಿಯು ಕೆಳಕಂಡಂತಿದೆ.

| ಕ್ರ. ಸಂ. | ಎಲ್.ವಿ.ಓ. ಕಛೇರಿಯ ವಿಳಾಸ | ಅಂಚೆ ಪಿನ್ ಕೋಡ್ ಸಂಖ್ಯೆ |
|---|---|---|
| 1. | ಎಲ್.ವಿ.ಓ.-010, ವಿ.ಟಿ.ಕೆ.-1, ಗಾಂಧಿನಗರ. | 560009, 560051, 560053 |
| 2. | ಎಲ್.ವಿ.ಓ.-020, ವಿ.ಟಿ.ಕೆ.-1, ಗಾಂಧಿನಗರ. | 560053, 560002 |
| 3. | ಎಲ್.ವಿ.ಓ.-030, ವಿ.ಟಿ.ಕೆ.-1, ಗಾಂಧಿನಗರ. | 560002 |
| 4. | ಎಲ್.ವಿ.ಓ.-040, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560025, 560027, 560051, 560052 |
| 5. | ಎಲ್.ವಿ.ಓ.-050, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560079, 560086, 560096 |
| 6. | ಎಲ್.ವಿ.ಓ.-060, ಎಲ್.ಐ.ಸಿ. ಬಿಲ್ಡಿಂಗ್, ಮಲ್ಲೇಶ್ವರಂ. | 560056, 560059, 560060, 560074, 560039, 560091, 560072. |
| 7. | ಎಲ್.ವಿ.ಓ.-070, ವಿ.ಟಿ.ಕೆ.-1, ಗಾಂಧಿನಗರ. | 560026, 560040, 560023 |
| 8. | ಎಲ್.ವಿ.ಓ.-080, ವಿ.ಟಿ.ಕೆ.-1, ಗಾಂಧಿನಗರ. | 560001, 560042, 560008 |
| 9. | ಎಲ್.ವಿ.ಓ.-090, ದೇವತಾ ಮ್ಯಾನ್ಸನ್, ಗಾಂಧಿನಗರ. | 560011, 560041, 560069, 560082, 560078 |
| 10. | ಎಲ್.ವಿ.ಓ.-100, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560004, 560018, 560019, 560028 |
| 11. | ಎಲ್.ವಿ.ಓ.-110, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560002 |
| 12. | ಎಲ್.ವಿ.ಓ.-120, ಎಂ.ಎಂ. ಕಟ್ಟಡ, ಚಾಮರಾಜಪೇಟೆ. | 560050, 560070, 560085, 560061, 560062, 560077, 560098. |

| ಕ್ರ. ಸಂ. | ಎಲ್.ವಿ.ಓ. ಕಛೇರಿಯ ವಿಳಾಸ | ಅಂಚೆ ಪಿನ್ ಕೋಡ್ ಸಂಖ್ಯೆ |
|---|---|---|
| 13. | ಎಲ್.ವಿ.ಓ.–130, ಅಭಯ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | 560003, 560020, 560021 |
| 14. | ಎಲ್.ವಿ.ಓ.–140, ರತ್ನಂ ಕಾಂಪ್ಲೆಕ್ಸ್, ಮಲ್ಲೇಶ್ವರಂ. | 560010, 560044, 560012, 560055 |
| 15. | ಎಲ್.ವಿ.ಓ.–150, ಲಕ್ಷ್ಮೀ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | 560006, 560024, 560045, 560046, 560063, 560064, 560065, 560080, 560092, 560094. |
| 16. | ಎಲ್.ವಿ.ಓ.–160, ಲಕ್ಷ್ಮೀ ಕಾಂಪ್ಲೆಕ್ಸ್, ಶೇಷಾದ್ರಿಪುರಂ. | ಯಾವುದೇ ಕ್ಷೇತ್ರವ್ಯಾಪ್ತಿ ನೀಡಿರುವುದಿಲ್ಲ. |
| 17. | ಎಲ್.ವಿ.ಓ.–015, ವಿ.ಟಿ.ಕೆ.2, ಕೋರಮಂಗಲ. | 560029, 560030, 560034, 560035, 560047, 560081, 560095 |
| 18. | ಎಲ್.ವಿ.ಓ.–025, ವಿ.ಟಿ.ಕೆ.2, ಕೋರಮಂಗಲ. | 560068, 560076, 560083, 560099, 560100, 562106, 562107, 562145, 562149, 562158, 561229, 561258 |
| 19. | ಎಲ್.ವಿ.ಓ.–035, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ. | 560016, 560036, 560048, 560049, 560066, 560067, 560087, 560093, 562114 |
| 20. | ಎಲ್.ವಿ.ಓ.–045, ಬಿ.ಡಿ.ಎ. ಕಾಂಪ್ಲೆಕ್ಸ್, ಇಂದಿರಾನಗರ. | 560007, 560017, 560037, 560038, 560071, 560075 |
| 21. | ಎಲ್.ವಿ.ಓ.–055, ಬಿ.ಡಿ.ಎ. ಕಾಂಪ್ಲೆಕ್ಸ್, ಹೆಚ್.ಆರ್.ಬಿ.ಆರ್. ಲೇಔಟ್, ಕಲ್ಯಾಣನಗರ. | 560005, 560032, 560033, 560043, 560084. |
| 22. | ಎಲ್.ವಿ.ಓ.–065, ಪಿ.ಐ.ಎ. ಸಂಕೀರ್ಣ, ಪೀಣ್ಯ. | 560013, 560014, 560015, 560031, 560054, 560057, 560073, 560088, 560089, 560090, 560097, 562123, 562132 |
| 23. | ಎಲ್.ವಿ.ಓ.–075, ಪಿ.ಐ.ಎ. ಸಂಕೀರ್ಣ, ಪೀಣ್ಯ. | 560022, 560058 |

ಈ ಹೊಸದಾಗಿ ಪುನರ್ ವ್ಯವಸ್ಥೆಗೊಳಿಸಿದ ಕಛೇರಿಗಳಿಗೆ ಸ್ಥಳೀಯವಾಗಿ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ಸ್ಥಳಾಂತರಿಸಲು ಉದ್ದೇಶಿಸಲಾಗಿದ್ದು ಪ್ರತಿ ಮೌಲ್ಯವರ್ಧಿತ ತೆರಿಗೆ ಕಛೇರಿಗಳಿಗೆ ಕೆಳಕಂಡಂತೆ ಅಧಿಕಾರಿ ಹಾಗೂ ಸಿಬ್ಬಂದಿಗಳ ಹುದ್ದೆಯನ್ನು ವ್ಯವಸ್ಥೆ ಮಾಡಲಾಗಿದೆ.

| ಕ್ರ. ಸಂ. | ಕಛೇರಿಗಳು | ವಾ.ತೆ.ಸ.ಆ. | ವಾ.ತೆ.ಅ. | ವಾ.ತೆ.ಪ. | ಪ್ರ.ದ.ಸ. | ದ್ವಿ.ದ.ಸ. | ಶೀ.ಲಿ. | ಬೆ.ಗಾ. | ಕ.ವ. | 'ಡಿ' ಗ್ರೂಪ್ |
|---|---|---|---|---|---|---|---|---|---|---|
| 1. | ಎಲ್.ವಿ.ಓ–15 | 1 | 1 | 2 | 2 | 6 | 1 | 2 | 2 | 2 |
| 2. | ಎಲ್.ವಿ.ಓ–25 | 1 | 1 | 2 | 2 | 6 | 1 | 2 | 2 | 2 |
| 3. | ಎಲ್.ವಿ.ಓ–35 | 1 | 1 | 2 | 2 | 6 | 1 | 2 | 2 | 2 |
| 4. | ಎಲ್.ವಿ.ಓ–45 | 1 | 1 | 2 | 2 | 6 | 1 | 2 | 2 | 2 |
| 5. | ಎಲ್.ವಿ.ಓ–55 | 1 | 1 | 2 | 2 | 6 | 1 | 2 | 2 | 2 |
| 6. | ಎಲ್.ವಿ.ಓ–65 | 1 | 1 | 2 | 2 | 6 | 1 | 2 | 2 | 2 |
| 7. | ಎಲ್.ವಿ.ಓ–75 | 1 | 1 | 2 | 2 | 6 | 1 | 2 | 2 | 2 |

ಈ ವ್ಯವಸ್ಥೆ ದಿನಾಂಕ:01.04.2007 ರಿಂದ ಜಾರಿಗೆ ಬರುತ್ತದೆ.

ವಾಣಿಜ್ಯ ತೆರಿಗೆ ಆಯುಕ್ತರು,
(ಕರ್ನಾಟಕ), ಬೆಂಗಳೂರು.

ಪಿ.ಆರ್.446

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ/ ಎಫ್–48/ 2007, ದಿನಾಂಕ:12ನೇ ಏಪ್ರಿಲ್, 2007**

**ಅರ್ಜಿದಾರರು:** (1) ಶ್ರೀಮತಿ ಶೋಭಾ (2) ಕುಮಾರಿ: ಮಂದಾರ (3) ಶ್ರೀ ದೊಡ್ಡರಾಮನಾಯ್ಕ (4) ಶ್ರೀಮತಿ ಲಕ್ಷ್ಮೀಬಾಯಿ
ವಾಸ:ಮಾಚೇನಹಳ್ಳಿ ತಾಂಡ್ಯ, ಮಾಚೇನಹಳ್ಳಿ ಅಂಚೆ, ವಯಾ ಕಳಸಾಪುರ, ಚಿಕ್ಕಮಗಳೂರು ತಾ: ಮತ್ತು ಜಿಲ್ಲೆ.

**ಪ್ರತಿವಾದಿಗಳು:** (1) ಶ್ರೀ ಇಂದ್ರಕುಮಾರ್ ಬಿನ್ ಸೋಮಶೇಖರಪ್ಪ, ವಯಸ್ಸು 50 ವರ್ಷ, ಎಲೆಕ್ಟ್ರಿಕಲ್ ಕಂಟ್ರಾಕ್ಟರ್, ಮಾಲೀಕರು: ಶ್ರೀ ವೀರಭದ್ರೇಶ್ವರ ಎಲೆಕ್ಟ್ರಿಕಲ್ಸ್, ಟೆಂಪಲ್ ಸ್ಟ್ರೀಟ್, ಹಳೇಬೀಡು, ಬೇಲೂರು ತಾ:
(2) ದಿ ಚೀಫ್ ಆಫೀಸರ್, ಚೆಸ್ಕಾಂ, ಹಳೇಬೀಡು, ಬೇಲೂರು ತಾ: ಚಿಕ್ಕಮಗಳೂರು ಜಿಲ್ಲೆ.

ಶ್ರೀ ಗೋಪಾಲನಾಯ್ಕ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ:17.01.2007ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರೂ ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಎನ್. ರಾಮಕೃಷ್ಣ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ
ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ–1, ಚಿಕ್ಕಮಗಳೂರು.

ಪಿ.ಆರ್.484

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ–ನಿಬಂಧಕರ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ವಿಷಯ:** ಸಮಾಪನಾದೇಶಿತ ವಿ.ಐ.ಎಸ್.ಎಲ್. ಮತ್ತು ಎಂ.ಪಿ.ಎಂ. ಎಸ್.ಸಿ.: ಎಸ್.ಟಿ: ನೌಕರರ ಗೃ.ನಿ.ಸ.ಸಂ.ನಿ., ಭದ್ರಾವತಿ ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಸ.ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ ರವರ ಆದೇಶ ಸಂಖ್ಯೆ: ಡಿಆರ್ಎಸ್.: ಸಮಾಪನೆ: ಡಿಎಲ್ಎಸ್:41: 2004–05: ದಿನಾಂಕ:20.09.2004.
2) ಸಹಕಾರ ಸಂಘಗಳ ಸ.ನಿ. ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಸನಿ–24: ಸಮಾಪನೆ: ಸಿಆರ್:79: 2006–07, ದಿನಾಂಕ:14.02.2007.

**ಪ್ರಸ್ತಾವನೆ:**

ವಿ.ಐ.ಎಸ್.ಎಲ್. ಮತ್ತು ಎಂ.ಪಿ.ಎಂ. ಎಸ್ಸಿ:ಎಸ್‌ಟಿ: ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಭದ್ರಾವತಿ ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ ಇವರ ಕಾರ್ಯಾಲಯದಲ್ಲಿ ಸಂಖ್ಯೆ: ಎಆರ್ಎಸ್: ಕೆ.ಜಿ.ಆರ್: ಇಎಸ್‌ಹೆಚ್‌ಜಿ: 10256:1983–84 ದಿನಾಂಕ:21.01.1984 ರಲ್ಲಿ ನೋಂದಣಿಯಾಗಿದ್ದು, ಕಾರ್ಯವ್ಯಾಪ್ತಿಯು ಭದ್ರಾವತಿ ನಗರ ಸಭೆಯ ಮತ್ತು ಅಧಿಸೂಚಿತ ಕಾರ್ಯವ್ಯಾಪ್ತಿಗೆ ಸೇರಿದ ಪ್ರದೇಶ ಮತ್ತು ವಿ.ಐ.ಎಸ್.ಎಲ್.ಗೆ ಸಂಬಂಧಿಸಿದ ಮತ್ತು ಕಂದಾಯ ಗ್ರಾಮಗಳಾದ ಬುಳ್ಳಾಪುರ, ಹೊಸಸಿದ್ದಾಪುರ, ಬೊಮ್ಮನಕಟ್ಟೆ, ಹಿರಿಯೂರು ಪ್ರದೇಶಗಳಿಗೆ ಸೀಮಿತವಾಗಿರುತ್ತದೆ. ಸಂಘವು ನೊಂದಣಿಯಾದ ಬೈಲದಲ್ಲಿಯ ನಿಬಂಧನೆಯಂತೆ ಕಾರ್ಯನಿರ್ವಹಿಸದೆ, ಕೆಳಕಂಡ ಆರೋಪಗಳನ್ನು ಮಾಡಿ ಆಡಳಿತ ಮಂಡಳಿಯವರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿತ್ತು.

1) ಆಡಳಿತ ಮಂಡಳಿ ಸಭೆಗಳನ್ನು 02–03ನೇ ಸಾಲಿನಲ್ಲಿ ನಡೆಸಿರುವುದಿಲ್ಲ.

2) ಸಂಘವು ನಷ್ಟವನ್ನು ಅನುಭವಿಸುತ್ತಿದ್ದು, ಸದಸ್ಯರ ಷೇರು ಬೆಲೆ ಶೂನ್ಯವಾಗಿದೆ.

3) ಉಪನಿಯಮಗಳ ಪ್ರಕಾರ ಇರುವ ಉದ್ದೇಶಗಳಂತೆ ಕಾರ್ಯನಿರ್ವಹಿಸುತ್ತಿಲ್ಲ.

ನೋಟೀಸ್ ತಲುಪಿದ 10 ದಿನಗಳೊಳಗೆ ವಿವರಣೆ ಸಲ್ಲಿಸುವಂತೆ ತಿಳಿಸಿದ್ದು, ಅವಧಿ ಗತಿಸಿದ್ದರೂ ವಿವರಣೆ ಸಲ್ಲಿಸದ ಕಾರಣ ಉಲ್ಲೇಖ (1)ರನ್ವಯ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡಿದ್ದು ಸಹಕಾರ ಅಭಿವೃದ್ಧಿ ಅಧಿಕಾರಿ, ಭದ್ರಾವತಿ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ. ಸದರಿಯವರು ದಿನಾಂಕ:14.10.2004 ರಂದು ಪ್ರಭಾರ

ವಹಿಸಿಕೊಂಡಿದ್ದು, ಸದರಿಯವರು ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿಗಾಗಿ ಸಲ್ಲಿಸಿರುವ ಆಧ್ಯತಾ ಪಟ್ಟಿಯನ್ನು ಈ ಕಛೇರಿಯಿಂದ ದಿನಾಂಕ:07.03.2007ರಂದು ಅನುಮೋದನೆ ಮಾಡಲಾಗಿರುತ್ತದೆ. ತದ ನಂತರ ಸಂಘದ ಚರಾಸ್ತಿ ವಿಲೇವಾರಿ ಮಾಡಿ ಲೆಕ್ಕಪತ್ರಗಳನ್ನು ದಿನಾಂಕ:31.03.2003 ರವರೆಗೆ ಆಡಿಟ್ ಮಾಡಿಸಿರುತ್ತಾರೆ. ದಿನಾಂಕ:01.04.2006 ರಿಂದ 03.02.2005ರ ವರೆಗಿನ ಮತ್ತು ದಿನಾಂಕ:01.04.2006 ರಿಂದ 03.02.2007 ರವರೆಗೆ ತಾತ್ಕಾಲಿಕ ಜಮಾ–ಖರ್ಚು ಲಾಭ–ನಷ್ಟ ತಯಾರಿಸಿ ಆಸ್ತಿ–ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುತ್ತಾರೆ. ಸಮಾಪನಾಧಿಕಾರಿಗಳು ದಿನಾಂಕ:20.02.2007ರಂದು ಅಂತಿಮ ಸಭೆ ನಡೆಸಿ ಸಂಘದ ನೊಂದಣಿಯನ್ನು ರದ್ದುಪಡಿಸಲು ಸಭೆಯಲ್ಲಿ ನಿರ್ಣಯಿಸಿ ನಡವಳಿಕೆ ಸಲ್ಲಿಸಿರುತ್ತಾರೆ. ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಶಿವಮೊಗ್ಗ ಉಪ–ವಿಭಾಗ, ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ನೊಂದಣಿ ರದ್ಧತಿಗೆ ಶಿಫಾರಸ್ಸು ಮಾಡಿರುತ್ತಾರೆ. ಸಮಾಪನಾಧಿಕಾರಿಯವರ ನಿರ್ಣಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ, ಶಿವಮೊಗ್ಗ ಇವರ ಶಿಫಾರಸ್ಸು ಆಧಾರಿತವಾಗಿ ನೊಂದಣಿ ರದ್ಧತಿಗೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರ.ಸಂ. ಡಿಆರ್‌ಎಸ್: ಸಮಾಪನೆ: ಡಿಎಲ್‌ಎಸ್: 41: 2004–05 /2930 ದಿನಾಂಕ:30ನೇ ಮಾರ್ಚ್, 2007**

ಕರ್ನಾಟಕ ಸಹಕಾರ ಸಂಘಗಳ 1959ರ ಕಲಂ 75ರನ್ವಯ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್‌ಎಂ:200: ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರ ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ–ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸಮಾಪನಾದೇಶಿಸಿ ವಿ.ಐ.ಎಸ್.ಎಲ್. ಮತ್ತು ಎಂ.ಪಿ.ಎಂ. ಎಸ್.ಸಿ:ಎಸ್‌ಟಿ: ಗೃಹನಿರ್ಮಾಣ ಸಹಕಾರ ಸಂಘ ನಿ., ಭದ್ರಾವತಿ ತಾಲ್ಲೂಕು ಇದರ ನೊಂದಣಿ ನಂ.ಎಆರ್‌ಎಸ್:ಕೆ.ಜಿ.ಆರ್.ಇಎಸ್‌ಹೆಚ್‌ಜಿ: 10256:1983–84 ದಿನಾಂಕ:21.01.1984 ಇದನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು ಮೂರು ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ–ವಿಭಾಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:30.03.2007 ರಂದು ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಹೊರಡಿಸಿದೆ.

**ಕೆ. ಈಶ್ವರಸ್ವಾಮಿ**
ಸಹಕಾರ ಸಂಘಗಳ ಉಪ–ನಿಬಂಧಕರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.486

**KARNATAKA ELECTRICITY REGULATORY COMMISSION**

**9/2, 6th & 7th Floor, Mahalaxmi Chambers, M.G. Road, Bangalore-560001**

**NOTIFICATION**

**No.KERC/E/11/0 Bangalore, Dated:16th October, 2007**

The posts indicated in the 1st Schedule of KERC (Recruitment and Conditions of Service) Regulations 2000 which were approved by Government carry the payscales applicable at the time of issue of the above Regulations on 24.05.2000.

Whereas, on the recommendation of the V Pay Commission, the Government vide its Order No.FD 8 SRP 2007 Dated:16.05.2007 has revised the payscales of the employees with effect from 01.07.2005 with the monetary benefits of the revised payscales payable only from 01.04.2006.

Whereas the payscales of the officials working in the Commission on deputation basis against the sanctioned posts have already been revised by their respective employers as per the above Government Order. The Commission, therefore, is required to pay the salaries of these officials as per the revised payscales. Further, the Commission will not be able to fill up the posts on the basis of the pre-revised payscales as no employee would be willing to work in the old payscales.

To overcome the above difficulty, it is necessary for the Commission to revise the payscales of the posts mentioned in the 1st Schedule of KERC (Recruitment and Conditions of Service) Regulations 2000 in terms of the Government Order No. FD 8 SRP 2007 Dated:16.05.2007. The Commission, therefore, in exercise of power conferred under Regulation 19 of the KERC (Recruitment and Conditions of Service) Regulations 2000 hereby orders to revise the payscales of the posts indicated in the 1st

Schedule of KERC (Recruitment and Conditions of Services) Regulations 2000 in accordance with Government Order No. FD 8 SRP 2007 Dated: 16.05.2007 as follows:

| Sl. No. | Designation | No. | Scale of Pay | |
|---|---|---|---|---|
| | | | Existing | Revised |
| 1. | Secretary | 01 | 14960-440-16720-500-18720 | 28275-675-30300-750-34800-850-39900 |
| 2. | Director (Technical) | 01 | 13820-380-14960-440-16720-500-17220 | 26250-675-30300-750-34800-850-36500 |
| 3. | Director (Tariff) | 01 | 13820-380-14960-440-16720-500-17220 | 26250-675-30300-750-34800-850-36500 |
| 4. | Deputy Director (Administration) | 01 | 10620-260-10880-320-13440-380-14960 | 20025-525-22650-600-26250-675-28275 |
| 5. | Deputy Director (Generation) | 01 | 10620-260-10880-320-13440-380-14960 | 20025-525-22650-600-26250-675-28275 |
| 6. | Deputy Director (Transmission) | 01 | 10620-260-10880-320-13440-380-14960 | 20025-525-22650-600-26250-675-28275 |
| 7. | Deputy Director (Distribution) | 01 | 10620-260-10880-320-13440-380-14960 | 20025-525-22650-600-26250-675-28275 |
| 8. | Deputy Director (Demand Forecast) | 01 | 10620-260-10880-320-13440-380-14960 | 20025-525-22650-600-26250-675-28275 |
| 9. | Senior Economic Analyst | 01 | 10620-260-10880-320-13440-380-14960 | 20025-525-22650-600-26250-675-28275 |
| 10. | Senior Financial Analyst | 01 | 10620-260-10880-320-13440-380-14960 | 20025-525-22650-600-26250-675-28275 |
| 11. | Deputy Director (Tariff) | 01 | 10620-260-10880-320-13440-380-14960 | 20025-525-22650-600-26250-675-28275 |
| 12. | Deputy Director (Legal) | 01 | 10620-260-10880-320-13440-380-14960 | 20025-525-22650-600-26250-675-28275 |
| 13. | Public Relations Officer | 01 | 10620-260-10880-320-13440-380-14960 | 20025-525-22650-600-26250-675-28275 |
| 14. | Consumer Advocate | 01 | 10620-260-10880-320-13440-380-14960 | 20025-525-22650-600-26250-675-28275 |
| 15. | Asst. Director (Legal) | 01 | 7400-200-8800-260-10880-320-13120 | 14050-350-14400-400-16800-450-19500-525-22650-600-25050 |
| 16. | Assistant Secretary | 01 | 7400-200-8800-260-10880-320-13120 | 14050-350-14400-400-16800-450-19500-525-22650-600-25050 |
| 17. | Accounts Officer | 01 | 7400-200-8800-260-10880-320-13120 | 14050-350-14400-400-16800-450-19500-525-22650-600-25050 |
| 18. | Manager | 01 | 5575-125-5700-150-7200-200-8800-260-10620 | 10800-300-12300-350-14400-400-16800-450-19500-525-20025 |
| 19. | Kannada Translator | 01 | Scale Less Post | Scale Less Post |
| 20. | Assistants | 13 | 4150-100-4450-125-5700-150-7200-200-7800 | 8000-200-8600-225-9500-250-10500-300-12300-350-14400-400-14800 |
| 21. | Private Secretaries | 04 | 5575-125-5700-150-7200-200-8800-260-10620 | 10800-300-12300-350-14400-400-16800-450-19500-525-20025 |

| Sl. No. | Designation | No. | Scale of Pay | |
|---|---|---|---|---|
| | | | Existing | Revised |
| 22. | Stenographers | 10 | 3850-100-4450-125-5700-150-7050 | 7275-175-7800-200-8600-225-9500-250-10500-300-12300-350-13350 |
| 23. | Data Entry Operator | 01 | 3850-100-4450-125-5700-150-7050 | 7275-175-7800-200-8600-225-9500-250-10500-300-12300-350-13350 |
| 24. | Drivers | 04 | 2775-75-3450-100-4450-125-4950 | 5500-100-6000-125-6500-150-7100-175-7800-200-8600-225-9500 |
| 25. | Group 'D' Employees | 08 | 2500-50-2700-75-3450-100-3850 | 4800-100-6000-125-6500-150-7100-175-7275 |

The Commission further orders that the provisions of The Karnataka Civil Services (Revised Pay) Rules 2007 and Related Orders issued by the Government thereunder shall mutatis mutandis be applicable to the employees of the Commission.

By Order of the Commission

PD-119

**SHAIK AHMED**

Secretary.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ: ಪ್ರ:ಎಫ್-72/07, ದಿನಾಂಕ:5ನೇ ಏಪ್ರಿಲ್, 2007**

**ಅರ್ಜಿದಾರರು:** **ವಿರುದ್ಧ** **ಪ್ರತಿವಾದಿಗಳು**

1) ಜಿ.ಆರ್. ಪುಷ್ಪ
2) ಎ.ವಿ. ಕುಶಲ್ ಅಪ್ಪಿ
3) ಸಿ.ಪಿ. ಕೃಷ್ಣರೆಡ್ಡಿ
ವಾಸ: ಚಿಗತನಹಳ್ಳಿ, ಚಳ್ಳಕೆರೆ ತಾ:

1) ಬಿ.ಎಸ್. ಪುಷ್ಪಲತ
W/o ಬಿ.ಎಸ್.ಚಿದಾನಂದ ರೆಡ್ಡಿ, S.R.E. ಬಸ್ ಮಾಲೀಕರು AP-02/U-3443. ಚಿತ್ರದುರ್ಗ ಟೌನ್.
2) ದಿ ಡಿವಿಜನಲ್ ಮ್ಯಾನೇಜರ್ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ, ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಜಿ.ಆರ್. ಪುಷ್ಪ ಇತರರು ಇವರು, ತಾವು ಮೃತ ಕೆ.ವಿ. ವೇಮರೆಡ್ಡಿ ಇವರ ಹೆಂಡತಿ, ಮಗ ಮತ್ತು ತಂದೆ ಎಂದೂ ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕೆ.ವಿ. ವೇಮರೆಡ್ಡಿ ಇವರು ಒಂದನೇ ಪ್ರತಿವಾದಿಗಳಾದ ಬಿ.ಎಸ್. ಪುಷ್ಪಲತಾ ಎಸ್.ಆರ್.ಇ. ಬಸ್ ಮಾಲೀಕರು ಇವರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಬಂಧಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್.487

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಲೋಕೋಪಯೋಗಿ ಇಲಾಖೆ**

**ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ-2005**

**ಭಾಗ-1**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಲೋಕೋಪಯೋಗಿ ಇಲಾಖೆ ಗುಣನಿಯಂತ್ರಣ ಉಪ-ವಿಭಾಗ ಗುಲ್ಬರ್ಗಾ ಕಛೇರಿಯ ಮಾಹಿತಿ ಹಕ್ಕು ನಿಯಮ 2005ರ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲೆಗಳನ್ನು ಪಡೆಯಬಹುದು.

1) ದಾಖಲಾತಿಗಳನ್ನು 15 ದಿನಗಳಲ್ಲಿ ನೀಡಲಾಗುವುದು (ರಜಾ ದಿನಗಳನ್ನು ಹೊರತುಪಡಿಸಿ)

2) ಈ ಕಛೇರಿಯಲ್ಲಿ ಮಾಹಿತಿ ದಾಖಲಾತಿಗಳನ್ನು ನೀಡುವ ಅಧಿಕಾರಿಗಳು.

| ಕ್ರಮ ಸಂಖ್ಯೆ | ಅಧಿಕಾರಿಗಳು (ಶ್ರೀಯುತರು) | ಪದನಾಮ | ನಿರ್ವಹಿಸುತ್ತಿರುವ ಉಸ್ತುವಾರಿ |
|---|---|---|---|
| 1. | ಮಲ್ಲಿಕಾರ್ಜುನ ಎಸ್. ನಂದಿಕೋಲ | ಕಿರಿಯ ಇಂಜಿನೀಯರ್ | ತಾಂತ್ರಿಕ ಶಾಖೆಯ ಉಸ್ತುವಾರಿ |
| 2. | ಶಿವಶರಣಪ್ಪಾ ಹುಗ್ಗಿ | ಪ್ರಥಮ ದರ್ಜೆ ಸಹಾಯಕ | ಆಡಳಿತ ಹಾಗೂ ಲೆಕ್ಕಪತ್ರ ಶಾಖೆಯ ಮೇಲ್ವಿಚಾರಣೆ. |

**ಸಕ್ಷಮ ಪ್ರಾಧಿಕಾರಿ**

ಶ್ರೀ ವಿ.ಎಸ್. ಚತುರೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು.

**ಮೇಲ್ಮನವಿ ಪ್ರಾಧಿಕಾರಿ**

ಶ್ರೀ ಎಂ. ನಾರಾಯಣ ಕಾರ್ಯನಿರ್ವಾಹಕ ಇಂಜಿನೀಯರರು.

**ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದ ಪಕ್ಷದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗಳಿಗೆ ನೀಡಬಹುದು.**

ಮುಖ್ಯ ಇಂಜಿನೀಯರರು, ಸಂಪರ್ಕ ಮತ್ತು ಕಟ್ಟಡ (ಉತ್ತರ) ವಲಯ ಧಾರವಾಡ

ಈ ಕಾಯ್ದೆಯ ಅಧಿನಿಯಮವು ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತವೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು,
ಲೋ.ಇ. ಗುಣನಿಯಂತ್ರಣ ಉಪ–ವಿಭಾಗ, ಗುಲ್ಬರ್ಗಾ.

ಭಾಗ–2

**ರಚನೆ ಪ್ರಕಾರ್ಯಗಳು ಹಾಗೂ ಕರ್ತವ್ಯಗಳ ವಿವರಗಳು**

ಲೋಕೋಪಯೋಗಿ ಇಲಾಖೆ ಗುಣನಿಯಂತ್ರಣ ಉಪ–ವಿಭಾಗ ಗುಲ್ಬರ್ಗಾ ಇದು ಗುಲ್ಬರ್ಗಾ ಲೋಕೋಪಯೋಗಿ ಇಲಾಖೆ ಉಪ–ವಿಭಾಗ ನಂ.1ರ ಆವರಣದಲ್ಲಿ ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಈ ಉಪ–ವಿಭಾಗವು ಲೋಕೋಪಯೋಗಿ ಇಲಾಖೆ ಸಂಪರ್ಕ ಮತ್ತು ಕಟ್ಟಡ ಉತ್ತರ ವಲಯದ ಕಾರ್ಯವ್ಯಾಪ್ತಿಯನ್ನು ಹೊಂದಿದೆ. ಈ ಉಪ–ವಿಭಾಗದ ಪ್ರಭಾರವನ್ನು ಶ್ರೀ ವಿ.ಎಸ್.ಚತುರೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಹೊಂದಿರುತ್ತಾರೆ. ಈ ಕಾರ್ಯಾಲಯದಲ್ಲಿ ಇಬ್ಬರು ಕಿರಿಯ ಇಂಜಿನೀಯರ ಹಾಗೂ ಅನೇಕ ಸಮೂಹ "ಸಿ" ಮತ್ತು "ಡಿ" ವರ್ಗದ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ.

ಈ ಕಾರ್ಯಾಲಯ ಮೂಲಕ ಕಾರ್ಯಕಲಾಪ ನಿರ್ವಹಿಸುತ್ತಿದ್ದು ಪ್ರಮುಖವಾಗಿ ಈ ಕೆಳಕಂಡ ವಿಷಯಗಳು ಈ ಉಪ–ವಿಭಾಗದ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.

ಎ) ರಸ್ತೆ, ಸೇತುವೆ ಹಾಗೂ ಕಟ್ಟಡ ಕಾಮಗಾರಿಗಳ ಗುಣಪರೀಕ್ಷೆ ವರದಿಗಳು.

ಬಿ) ರಾಜ್ಯ ಹೆದ್ದಾರಿ ವರದಿಗಳು ಜಿಲ್ಲಾ ಮುಖ್ಯ ರಸ್ತೆ, ರಸ್ತೆ ಸ್ಥಿತಿಗತಿ ಸಮೀಕ್ಷೆ.

ಸಿ) ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ಸೇವೆ ಕುರಿತು ಪತ್ರ ವ್ಯವಹಾರ ಹಾಗೂ ಸೇವಾ ಪುಸ್ತಕಗಳ ನಿರ್ವಹಣೆ

ಡಿ) ಅಧಿಕಾರಿಗಳು ಹಾಗೂ ಸಿಬ್ಬಂದಿಯವರ ವೇತನ ಭತ್ಯೆಗಳ ಬಟವಾಡೆ.

ಇ) ವೇತನ, ಹಬ್ಬದ ಮುಂಗಡ ಮಂಜೂರಾತಿ ಹಾಗೂ ಬಟವಾಡೆ.

ಎಫ್) ಅಧಿಕಾರಿಗಳ ಮತ್ತು ಸಿಬ್ಬಂದಿಯವರ ಚರಾಸ್ತಿ ಹಾಗೂ ಸ್ಥಿರಾಸ್ತಿ ಖರೀದಿಗಳಿಗೆ ಪತ್ರ ವ್ಯವಹಾರ

ಜಿ) ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಗಳು ಹಾಗೂ ಕಾರ್ಯನಿರ್ವಹಣಾ ವರದಿಗಳ ನಿರ್ವಹಣೆ

ಎಚ್) ವಿಧಾನ ಸಭೆ ಮತ್ತು ವಿಧಾನ ಪರಿಷತ್ ಪ್ರಶ್ನೆಗಳ ನಿರ್ವಹಣೆ

ಐ) ನ್ಯಾಯಾಲಯ ಹಾಗೂ ಇಲಾಖಾ ವಿಚಾರಣೆ ಪ್ರಕರಣಗಳ ನಿರ್ವಹಣೆ

ಜೆ) ನಿವೃತ್ತಿ ವೇತನ ಪ್ರಕರಣಗಳು

ಕೆ) ಸಿಬ್ಬಂದಿ ಕೆಲಸದ ಅನುದಾನದ ಅಂದಾಜು ಹಾಗೂ ಎಫ್.ಆರ್.ಐ. ತಯಾರಿಸುವುದು.

ಎಲ್) ಅನುದಾನದ ಬಿಡುಗಡೆಗಾಗಿ ಪತ್ರ ವ್ಯವಹಾರ

ಎಂ) ಲೆಕ್ಕ ಪತ್ರ ಶಾಖೆಯ ಪತ್ರ ವ್ಯವಹಾರ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು,
ಪಿ.ಆರ್.488 ಲೋ.ಇ. ಗುಣನಿಯಂತ್ರಣ ಉಪ–ವಿಭಾಗ, ಗುಲ್ಬರ್ಗಾ.

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ದಕ್ಷಿಣ ಕನ್ನಡ ಉಪ ವಿಭಾಗ–1 ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು– ಇವರ ನ್ಯಾಯಾಲಯ

**ಸಂಖ್ಯೆ: ಡಬ್ಲ್ಯೂಸಿಎ/ ಸಿಆರ್–29/ 06 ಎನ್.ಎಫ್., ದಿನಾಂಕ:23ನೇ ಮಾರ್ಚ್, 2007**

| ಅರ್ಜಿದಾರರು: | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಮಹಾಲಕ್ಷ್ಮಿ, W/o ರಾಮಚಂದ್ರ.<br>2) ಕು: ಲಿಖಿತ ಆರ್.ಬಿ. ರಾಮಚಂದ್ರ ರವರ ಮಗಳು.<br>3) ಕುಮಾರ್ ಕಾರ್ತಿಕ್, ದಿವಂಗತ ರಾಮಚಂದ್ರರವರ ಮಗ.<br>4) ಕುಮಾರಿ: ಸುಶ್ಮಿತ, ದಿವಂಗತ ರಾಮಚಂದ್ರರ ಮಗಳು.<br>5) ಶ್ರೀಮತಿ ಲೀಲಾ (ತಾಯಿ) W/o ಪಕೀರ ಪೂಜಾರಿ, ಬಗಂಬಿಲ ಹೌಸ್, ನಿತ್ಯಾನಂದ ನಗರ, ಮಂಗಳೂರು, ದೇರಳಕಟ್ಟೆ. | | 1) ಕೆ. ಹಮೀದ್, S/o ತೊಬಾಕರ್<br>ವಾಸ: ಬಗಂಬಿಲ, ಶಾಂತಿಧಾಮ, ದೇರಳಕಟ್ಟೆ, ಮಂಗಳೂರು.<br>2) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಮಂಗಳೂರು ಬ್ರಾಂಚ್, 2ನೇ ಮಹಡಿ, ಸೆನೆಟರಿ ಬಿಲ್ಡಿಂಗ್, ಗಣಪತಿ ಹೈಸ್ಕೂಲ್ ರೋಡ್, ಮಂಗಳೂರು. |

### ಅಧಿಸೂಚನೆ

ಅರ್ಜಿದಾರಳಾದ ಶ್ರೀಮತಿ ಮಹಾಲಕ್ಷ್ಮಿ ಇವರು ತಮ್ಮ ಗಂಡನಾದ ಶ್ರೀ ರಾಮಚಂದ್ರ ಇವರು 1ನೇ ಪ್ರತಿವಾದಿಗಳಾದ ಶ್ರೀ ಕೆ ಹಮೀದ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:19.06.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ–1, ಮಂಗಳೂರು.

ಪಿ.ಆರ್.489

## ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ, ಇವರ ನ್ಯಾಯಾಲಯದ ನಡವಳಿಗಳು

| ಫಿರ್ಯಾದುದಾರರು | ಪ್ರತಿವಾದಿ |
|---|---|
| ಅಬಕಾರಿ ಉಪ ನಿರೀಕ್ಷಕರು–1 ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ. | ಸಿದ್ದಪ್ಪಾಜಿ ಬಿನ್ ಸಿದ್ದನಾಯಕ, ಹಳೇ ಮಟನ್ ಬೀದಿ, ಟಿ.ನರಸೀಪುರ, ಮೈಸೂರು ಜಿಲ್ಲೆ. |

**ಪ್ರಸ್ತಾವನೆ:**

ದಿನಾಂಕ:01.09.2006 ರಂದು ಬೆಳಿಗ್ಗೆ 11.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–1, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ–ಇವರು ಮಂಡ್ಯ ತಾಲ್ಲೂಕು ಪುರ–ತಿಮ್ಮನಹೊಸೂರು ಮಾರ್ಗದ ಮಧ್ಯದಲ್ಲಿರುವ ಲೋಕಸರ ಗ್ರಾಮಕ್ಕೆ ಹೋಗುವ ರಸ್ತೆಯ ತಿರುವಿನಲ್ಲಿ ವಾಹನ ಟಿವಿಎಸ್–50 ಸಂಖ್ಯೆ: ಕೆಎ–09/ 6383 ರಲ್ಲಿ ಅಕ್ರಮವಾಗಿ 35.000 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ, ಸೇಂದಿ ಮತ್ತು ವಾಹನವನ್ನು ಜಫ್ತು ಮಾಡಿ, ಪ್ರ.ಮಾ.ವ. ಸಂಖ್ಯೆ:6/06–07 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 43 ಮತ್ತು 43(ಎ)ರ ರೀತ್ಯಾ ಕ್ರಮ ಜರುಗಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ:25.10.2006 ರಂದು ವಾಹನ ಮಾಲೀಕತ್ವದ ವಿವರವನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು, ವಾಹನದ 'ಬಿ' ವಹಿ ರೀತ್ಯಾ ವಾಹನ ಮಾಲೀಕರಾದ ಶ್ರೀ ಸಿದ್ದಪ್ಪಾಜಿ ಬಿನ್ ಸಿದ್ದನಾಯಕ–ಇವರಿಗೆ ದಿನಾಂಕ:05.02.2007 ರಂದು ಅಬಕಾರಿ ಕಾಯ್ದೆ ಉಲ್ಲಂಘನೆ ಹಾಗೂ ಉಲ್ಲಂಘನೆಗಾಗಿ ವಾಹನವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಕಲಂ 43(ಬಿ) ಅಡಿಯಲ್ಲಿ

ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಿದ್ದು, ಸದರಿಯವರಿಗೆ (7) ದಿವಸಗಳ ಕಾಲಾವಕಾಶ ನೀಡಲಾಗಿತ್ತು. ನಂತರ ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣ ದಳ, ಮಂಡ್ಯ-ಇವರು ದಿನಾಂಕ:21.02.2007 ರಂದು ಸದರಿ ನೋಟೀಸನ್ನು ಖುದ್ದು ಜಾರಿ ಮಾಡಲು ಹೋದ ಸಂದರ್ಭದಲ್ಲಿ ಶ್ರೀ ಸಿದ್ದಪ್ಪಾಜಿ ಬಿನ್ ಸಿದ್ದನಾಯಕ ಎಂಬ ಹೆಸರಿನ ಯಾವುದೇ ವ್ಯಕ್ತಿ ಈ ಬೀದಿಯಲ್ಲಿ ಇರುವುದಿಲ್ಲವೆಂದು ಸ್ಥಳೀಯರು ತಿಳಿಸಿರುವುದಾಗಿ ಮಹಜರ್‌ನ ಮುಖಾಂತರ ತಿಳಿಸಿರುತ್ತಾರೆ. ಇದುವರೆವಿಗೂ ಯಾರೊಬ್ಬರು ಸದರಿ ಮೇಲ್ಕಂಡ ಸೇಂದಿ ಮತ್ತು ವಾಹನವನ್ನು ತಮ್ಮದೆಂದು ಹಕ್ಕು ಚಲಾಯಿಸಲು ಬಂದಿರುವುದಿಲ್ಲ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಸೇಂದಿ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/ 16/ 06-07, ದಿನಾಂಕ:24ನೇ ಫೆಬ್ರವರಿ, 2007**

ಕೆ.ಎಲ್. ನಂಜಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 35 ಲೀ. ಸೇಂದಿ ಮತ್ತು ಟಿವಿಎಸ್-50 ಸಂಖ್ಯೆ:ಕೆಎ-09-/6383 ದ್ವಿಚಕ್ರ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ಮತ್ತು 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹಾಗೂ ಹೀಗೆ ಮುಟ್ಟುಗೋಲು ಹಾಕಿಕೊಂಡ ಸೇಂದಿಯನ್ನು ಮಾದರಿ ಹೊರತು ಪಡಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ. ಈ ಆದೇಶವನ್ನು ಇಂದು, ಅಂದರೆ ದಿನಾಂಕ:24.02.2007 ರಂದು ಉಕ್ತಲೇಖನ ನೀಡಿ, ಬೆರಳಚ್ಚು ಮಾಡಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಕೆ.ಎಲ್. ನಂಜಪ್ಪ**
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ವಿಚಕ್ಷಣ ದಳ, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.490

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ, ಇವರ ನ್ಯಾಯಾಲಯದ ನಡವಳಿಗಳು**

| ಫಿರ್ಯಾದುದಾರರು | ಪ್ರತಿವಾದಿ |
|---|---|
| ಅಬಕಾರಿ ಉಪ ನಿರೀಕ್ಷಕರು-1 (ಜಾರಿ ಮತ್ತು ತನಿಖೆ) ಮಂಡ್ಯ ತಾಲ್ಲೂಕು. | ಬಿ. ಪುಟ್ಟರಾಜು ಬಿನ್ ಬಸವಲಿಂಗಯ್ಯ, ನಂ.1808/1, 9ನೇ ತಿರುವು, ಅಶೋಕಪುರಂ, ಮೈಸೂರು. |

**ಪ್ರಸ್ತಾವನೆ:**

ದಿನಾಂಕ:11.07.2006 ರಂದು ಬೆಳಿಗ್ಗೆ 10.00 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು-1, (ಜಾರಿ ಮತ್ತು ತನಿಖೆ), ಮಂಡ್ಯ ತಾಲ್ಲೂಕು-ಇವರು ಮಂಡ್ಯ ತಾಲ್ಲೂಕು ಹೆಮ್ಮಿಗೆ ಗ್ರಾಮದ ಚನ್ನಯ್ಯ ನಾಲೆಯ ಹತ್ತಿರ (ಮಂಡ್ಯ-ಕೆ.ಎಂ.ದೊಡ್ಡಿ ರಸ್ತೆ) ಆಟೋರಿಕ್ಷಾ ಸಂಖ್ಯೆ: ಸಿಟಿಜ-9631 ವಾಹನದಲ್ಲಿ ಅಕ್ರಮವಾಗಿ 70.000 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಹಚ್ಚಿ, ಸೇಂದಿ ಮತ್ತು ವಾಹನವನ್ನು ಜಫ್ತು ಮಾಡಿ, ಪ್ರ.ಮಾ.ವ. ಸಂಖ್ಯೆ:2/06-07ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 38(ಎ) ಮತ್ತು 43ರ ರೀತ್ಯಾ ಕ್ರಮ ಜರುಗಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ:02.07.2006 ರಂದು ವಾಹನ ಮಾಲೀಕತ್ವದ ವಿವರವನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಪತ್ರ ಬರೆಯಲಾಗಿದ್ದು, ವಾಹನದ 'ಬಿ' ವಹಿ ರೀತ್ಯಾ ವಾಹನ ಮಾಲೀಕರಾದ ಶ್ರೀ ಬಿ. ಪುಟ್ಟರಾಜು ಬಿನ್ ಬಸವಲಿಂಗಯ್ಯ-ಇವರಿಗೆ ದಿನಾಂಕ:18.12.2006 ರಂದು ಅಬಕಾರಿ ಕಾಯ್ದೆ ಉಲ್ಲಂಘನೆ ಹಾಗೂ ಉಲ್ಲಂಘನೆಗಾಗಿ ವಾಹನವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಕಲಂ 43(ಬಿ) ಅಡಿಯಲ್ಲಿ ಕೇಳುವ ನೋಟೀಸನ್ನು ನೀಡಿ, ಸದರಿಯವರಿಗೆ (7) ದಿವಸಗಳ ಕಾಲಾವಕಾಶ ನೀಡಲಾಗಿತ್ತು. 'ಬಿ' ವಹಿ ರೀತ್ಯಾ ವಾಹನ ಮಾಲೀಕರಾದ ಬಿ. ಪುಟ್ಟರಾಜು ಬಿನ್ ಬಸವಲಿಂಗಯ್ಯ-ಇವರು ಸದರಿ ಕಾರಣ ಕೇಳುವ ನೋಟೀಸ್‌ಗೆ ಮನವಿ ಸಲ್ಲಿಸಿ, ಸದರಿ ವಾಹನವನ್ನು ಶ್ರೀ ಕೆ.ಎಸ್. ಹೇಮಂತ್‌ಕುಮಾರ್, ಮೈಸೂರು-ಇವರಿಗೆ ದಿನಾಂಕ:07.06.2001ರಲ್ಲೇ ಮಾರಾಟ ಮಾಡಿರುವುದಾಗಿ ಕ್ರಯ ಪತ್ರದ ಜೆರಾಕ್ಸ್ ಪ್ರತಿಯನ್ನು ಸಲ್ಲಿಸಿ, ಈ ವಾಹನಕ್ಕೂ ನನಗೂ ಏನೂ ಸಂಬಂಧವಿಲ್ಲವೆಂದು ತಿಳಿಸಿರುತ್ತಾರೆ. ದಿನಾಂಕ:27.02.2007ರಲ್ಲಿ ಅಬಕಾರಿ ಉಪ ನಿರೀಕ್ಷಕರು-1, (ಜಾರಿ ಮತ್ತು ತನಿಖೆ), ಮಂಡ್ಯ ತಾಲ್ಲೂಕು-ಇವರು ತಮ್ಮ ಪತ್ರದಲ್ಲಿ ಸದರಿ ಪ್ರಕರಣದ ಸೇಂದಿ ಮತ್ತು ವಾಹನವನ್ನು ಇದುವರೆವಿಗೂ ಯಾರೊಬ್ಬರು ತಮ್ಮದೆಂದು ಹಕ್ಕು ಚಲಾಯಿಸಲು ಬಂದಿರುವುದಿಲ್ಲ ಆದುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಸೇಂದಿ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೋರಿರುತ್ತಾರೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/ 04/ 06–07, ದಿನಾಂಕ:1ನೇ ಮಾರ್ಚ್, 2007**

ಕೆ.ಎಲ್. ನಂಜಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಯಾರೊಬ್ಬರು ಈ ಪ್ರಕರಣದ ಸೇಂದಿ ಮತ್ತು ವಾಹನವನ್ನು ತಮ್ಮದೆಂದು ಹಕ್ಕು ಚಲಾಯಿಸದೇ ಇರುವುದರಿಂದ ಮತ್ತು ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 70.000 ಲೀ. ಸೇಂದಿ ಮತ್ತು ಆಟೋರಿಕ್ಷಾ ಸಂಖ್ಯೆ:ಸಿಟಿಏ–9631 ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ಮತ್ತು 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ. ಈ ಆದೇಶವನ್ನು ಇಂದು, ಅಂದರೆ ದಿನಾಂಕ:01.03.2007 ರಂದು ಉಕ್ತಲೇಖನ ನೀಡಿ, ಬೆರಳಚ್ಚು ಮಾಡಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಕೆ.ಎಲ್. ನಂಜಪ್ಪ**
ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ವಿಚಕ್ಷಣ ದಳ, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.491

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ, ಇವರ ನ್ಯಾಯಾಲಯದ ನಡವಳಿಗಳು**

| ಫಿರ್ಯಾದುದಾರರು | ಪ್ರತಿವಾದಿ |
|---|---|
| ಅಬಕಾರಿ ಉಪ ನಿರೀಕ್ಷಕರು–2 ವಿಚಕ್ಷಣ ದಳ, ಮಂಡ್ಯ ಜಿಲ್ಲೆ, ಮಂಡ್ಯ ತಾಲ್ಲೂಕು. | ಸಿ. ನಾಗರಾಜು ಬಿನ್ ಎ.ಸಿ. ಚೆನ್ನಪ್ಪ, ನಂ.28, 'ಒ' ಬ್ಲಾಕ್, ಪೊಲೀಸ್ ಲೇನ್, ಬೆಂಗಳೂರು. |

**ಪ್ರಸ್ತಾವನೆ:**

ದಿನಾಂಕ:28.07.2006 ರಂದು ರಾತ್ರಿ 8.30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ–ಇವರು ಶ್ರೀರಂಗಪಟ್ಟಣ ತಾಲ್ಲೂಕು ಶ್ರೀರಂಗಪಟ್ಟಣ–ಕೃಷ್ಣರಾಜಪೇಟೆ ಮಧ್ಯದಲ್ಲಿರುವ ದರಸಗುಪ್ಪೆ ಗ್ರಾಮದ ಸೇತುವೆ ಬಳಿ ರಸ್ತೆ ಗಸ್ತು ಮಾಡುತ್ತಿದ್ದಾಗ ಆರೋಪಿಯು ಅಧಿಕಾರಿಯವರನ್ನು ಕಂಡು ವಾಹನವನ್ನು ಬಿಟ್ಟು ಓಡಿ ಹೋದ ಕಾರಣ ವಾಹನದ ಬಳಿ ಬಂದು ಪರಿಶೀಲಿಸಲಾಗಿ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–01/ಕೆ–1199 ರಲ್ಲಿ ಅಕ್ರಮವಾಗಿ 5.000 ಲೀ. ಸಾರಾಯಿ ಇದ್ದುದ್ದರಿಂದ ಸಾರಾಯಿ ಮತ್ತು ವಾಹನವನ್ನು ಜಫ್ತು ಮಾಡಿ, ಪ್ರ.ಮಾ.ವ. ಸಂಖ್ಯೆ: 2/06–07 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 32, 38(ಎ), 43 ಮತ್ತು 43(ಎ)ರ ರೀತ್ಯಾ ಕ್ರಮ ಜರುಗಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ:25.10.2006 ರಂದು ವಾಹನ ಮಾಲೀಕತ್ವದ ವಿವರವನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆಯಲಾಗಿದ್ದು, ವಾಹನದ 'ಬಿ' ವಹಿ ರೀತ್ಯಾ ವಾಹನ ಮಾಲೀಕರಾದ ಸಿ. ನಾಗರಾಜು ಬಿನ್ ಎ.ಸಿ. ಚೆನ್ನಪ್ಪ– ಇವರಿಗೆ ದಿನಾಂಕ:10.01.2007 ರಂದು ಅಬಕಾರಿ ಕಾಯ್ದೆ ಉಲ್ಲಂಘನೆ ಹಾಗೂ ಉಲ್ಲಂಘನೆಗಾಗಿ ವಾಹನವನ್ನು ಬಳಸಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಕಲಂ 43(ಬಿ) ಅಡಿಯಲ್ಲಿ ಕೇಳುವ ನೋಟೀಸನ್ನು ಅಂಚೆ ಮೂಲಕ ಕಳುಹಿಸಿದ್ದು ಸದರಿಯವರಿಗೆ (7) ದಿವಸಗಳ ಕಾಲಾವಕಾಶ ನೀಡಲಾಗಿತ್ತು. ಸದರಿ ನೋಂದಣಿ ಅಂಚೆಯು ಪ್ರತಿವಾದಿಗಳು ಸದರಿ ವಿಳಾಸದಲ್ಲಿರುವುದಿಲ್ಲವೆಂದು ವಾಪಸ್ಸಾಗಿರುತ್ತದೆ. ನಂತರ ಅಬಕಾರಿ ಉಪ ನಿರೀಕ್ಷಕರು, ವಿಚಕ್ಷಣ ದಳ, ಮಂಡ್ಯ– ಇವರಿಗೆ ಸದರಿ ನೋಟೀಸನ್ನು ಜಾರಿ ಮಾಡಲು ಸೂಚಿಸಲಾಗಿ ಸದರಿಯವರ ಸಿಬ್ಬಂದಿಯವರು ದಿನಾಂಕ:05.03.2007ರಂದು ಸದರಿ ನೋಟೀಸನ್ನು ಖುದ್ದು ಜಾರಿ ಮಾಡಲು ಹೋದ ಸಂದರ್ಭದಲ್ಲಿ ಸಿ.ನಾಗರಾಜ್ ಬಿನ್ ಎ.ಸಿ. ಚೆನ್ನಪ್ಪ, ನಂ.28, 'ಒ' ಬ್ಲಾಕ್, ಪೊಲೀಸ್ ಲೇನ್, ಬೆಂಗಳೂರು– ಈ ವಿಳಾಸದಲ್ಲಿ ಸದರಿ ಹೆಸರಿನ ಯಾವುದೇ ವ್ಯಕ್ತಿ ಇರುವುದಿಲ್ಲವೆಂದು ಸ್ಥಳೀಯರು ತಿಳಿಸಿರುವುದಾಗಿ ಮಹಜರ್‌ನ ಮುಖಾಂತರ ತಿಳಿಸಿರುತ್ತಾರೆ. ಅಬಕಾರಿ ಉಪ ನಿರೀಕ್ಷಕರು–2, ವಿಚಕ್ಷಣ ದಳ, ಮಂಡ್ಯ ಜಿಲ್ಲೆ–ಇವರು ದಿನಾಂಕ:07.03.2007ರ ಪತ್ರದಲ್ಲಿ ಸದರಿ ಮೇಲ್ಕಂಡ ಸಾರಾಯಿ ಮತ್ತು ವಾಹನವನ್ನು ಇದುವರೆವಿಗೂ ಯಾರೊಬ್ಬರು ತಮ್ಮದೆಂದು ಹಕ್ಕು ಚಲಾಯಿಸಲು ಬಂದಿರುವುದಿಲ್ಲ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸಾರಾಯಿ ಮತ್ತು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಿಳಿಸಿರುತ್ತಾರೆ. ಆದುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/ 07/ 06–07, ದಿನಾಂಕ:9ನೇ ಮಾರ್ಚ್, 2007**

ಕೆ.ಎಲ್. ನಂಜಪ್ಪ, ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 5 ಲೀ. ಸಾರಾಯಿ ಮತ್ತು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–01/ಕೆ–1199 ದ್ವಿಚಕ್ರ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ) ಮತ್ತು 43(ಎ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ ಹಾಗೂ ಹೀಗೆ ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ಮಾದರಿ ಹೊರತು ಪಡಿಸಿ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ–ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿದೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುತ್ತದೆ. ಈ ಆದೇಶವನ್ನು ಇಂದು, ಅಂದರೆ ದಿನಾಂಕ:09.03.2007 ರಂದು ಉಕ್ತಲೇಖನ ನೀಡಿ, ಬೆರಳಚ್ಚು ಮಾಡಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಕೆ.ಎಲ್. ನಂಜಪ್ಪ**

ಪಿ.ಆರ್.492 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ವಿಚಕ್ಷಣ ದಳ, ಮಂಡ್ಯ ಜಿಲ್ಲೆ, ಮಂಡ್ಯ.

## ಆರ್ಥಿಕ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಎಫ್‌ಡಿ 21 ಇಪಿಎಸ್ 2006, ಬೆಂಗಳೂರು, ದಿನಾಂಕ:20ನೇ ಜೂನ್, 2007**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಅಧಿಸೂಚನೆ ಸಂಖ್ಯೆ: Confn.25/2005-06/PSC ದಿನಾಂಕ: 28.02.2006ರಲ್ಲಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಅಬಕಾರಿ ಇಲಾಖೆಯ ಅಬಕಾರಿ ಉಪ ಅಧೀಕ್ಷಕ ಹುದ್ದೆಗೆ ಆಯ್ಕೆ ಮಾಡಿರುವ ಶ್ರೀ ಮೋಸೆಸ್ ಸಾಮ್ಯುಯೆಲ್ ಎಲ್. ಮನೆ ನಂ.7–365, 2ನೇ ಕ್ರಿಶ್ಚಿಯನ್ ಸ್ಟ್ರೀಟ್, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ ಇವರನ್ನು ರೂ.10800–300–12300–350–14400–400–16800–450–19500–525–20025 ವೇತನ ಶ್ರೇಣಿಯ ಅಬಕಾರಿ ಉಪ ಅಧೀಕ್ಷಕ ಹುದ್ದೆಗೆ ಪರಿವೀಕ್ಷಣೆಯ ಮೇಲೆ (on probation) ಈ ಮೂಲಕ ನೇಮಕ ಮಾಡಲಾಗಿದೆ.

ಈ ಪರೀಕ್ಷಾರ್ಥಿಯ ಪರಿವೀಕ್ಷಣಾ ಅವಧಿಯು ಎರಡು ವರ್ಷಗಳಾಗಿರುತ್ತದೆ. ಈ ಅವಧಿಯಲ್ಲಿ ಪರೀಕ್ಷಾರ್ಥಿಯು ಅಬಕಾರಿ ಉಪ ಅಧೀಕ್ಷಕ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕು.

ಈ ಪರೀಕ್ಷಾರ್ಥಿ ಅಧಿಕಾರಿಯು 1999ನೇ ತಂಡದಲ್ಲಿ ಆಯ್ಕೆಯಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ:224 ಇಪಿಎಸ್ 2005 ದಿನಾಂಕ:30.01.2006ರಲ್ಲಿ ಈಗಾಗಲೇ ನೇಮಕಾತಿ ಹೊಂದಿರುವ ಅಬಕಾರಿ ಉಪ ಅಧೀಕ್ಷಕ ಅಧಿಕಾರಿಗಳಿಗಿಂತ ಜೇಷ್ಠತೆಯಲ್ಲಿ ಹಿರಿಯರಾಗಿರುತ್ತಾರೆಂದು ತೀರ್ಮಾನಿಸಲಾಗಿದೆ.

ಈ ನೇಮಕಾತಿಯು ಭಾರತದ ಸರ್ವೋಚ್ಚ ನ್ಯಾಯಾಲಯವು ರಿಟ್ ಅರ್ಜಿ (ಸಿವಿಲ್) ಸಂಖ್ಯೆ: 232:1999, ಕರ್ನಾಟಕ ಉಚ್ಚ ನ್ಯಾಯಾಲಯದ ಮುಂದಿರುವ ರಿಟ್ ಅರ್ಜಿ ಸಂಖ್ಯೆ:27140: 2005 ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮುಂದಿರುವ ಅರ್ಜಿ ಸಂಖ್ಯೆ: 4184: 2003, 1512:2003, 1741: 2003 ಮತ್ತು 1172: 2006ಗಳಲ್ಲಿ ನ್ಯಾಯಾಲಯಗಳು ನೀಡುವ ಅಂತಿಮ ತೀರ್ಪಿಗೊಳಪಟ್ಟಿರುತ್ತದೆ.

ಈ ನೇಮಕಾತಿ ಅಧಿಸೂಚನೆಯನ್ನು ನೊಂದಾಯಿತ ಅಂಚೆ ಮುಖಾಂತರ ರವಾನಿಸಿದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಅಭ್ಯರ್ಥಿಯು ಅಬಕಾರಿ ಆಯುಕ್ತರು, ಒಕ್ಕಲಿಗರ ಭವನ, ಕಿತ್ತೂರು ರಾಣಿ ಚನ್ನಮ್ಮ ವೃತ್ತ, ಬೆಂಗಳೂರು ಇವರ ಮುಂದೆ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಕೋದಂಡರಾಮ ಗೌಡ**

ಪಿ.ಆರ್.859 ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಅಬಕಾರಿ)

## ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರ ನಡವಳಿಗಳು

**ಸಂಖ್ಯೆ: ಸಿಬ್ಬಂದಿ: ಶಿಸ್ತು: ಅಗೈಹಾ:27/ 05–06, ದಿನಾಂಕ:16ನೇ ಜೂನ್, 2007**

**ವಿಷಯ:** ಶ್ರೀ ಎಸ್. ಪ್ರಕಾಶ್, ದ್ವಿ.ದ.ಸ.ತಹಶೀಲ್ದಾರ್ ಕಛೇರಿ, ಕೆ.ಆರ್. ನಗರ ಇವರ ಅ.ಗೈ.ಹಾ.ಬಗ್ಗೆ ಶಿಸ್ತು ಕ್ರಮ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಭೂ.ಜಂ.ನಿ. ಮೈಸೂರು ಇವರ ಕಾರಣ ಕೇಳಿ ನೋಟೀಸ್ (ಆರೋಪ ಪಟ್ಟಿಯೊಂದಿಗೆ) ಸಂಖ್ಯೆ: ಸಿ:ಶಿ: ಅಗೈ:09/04–05 ದಿನಾಂಕ:17.01.2005.

2) ವಿಚಾರಣಾಧಿಕಾರಿಗಳನ್ನು ನೇಮಕ ಮಾಡುವ ಕುರಿತು ಈ ಕಛೇರಿಯ ಸಮಸಂಖ್ಯೆಯ ನಡವಳಿ ದಿನಾಂಕ:30.01.2006.

3) ವಿಚಾರಣಾಧಿಕಾರಿಗಳ ವರದಿ ಸಂಖ್ಯೆ: ಸಿಬ್ಬಂದಿ: ಶಿಸ್ತು: ಅನಧಿಕೃತ ಗೈರು ಹಾಜರಾತಿ: 27/05–06 ದಿನಾಂಕ:27.11.2006.

4) ಈ ಕಛೇರಿಯ 2ನೇ ಕಾರಣ ಕೇಳಿ ನೋಟೀಸ್ ಸಮಸಂಖ್ಯೆ ದಿನಾಂಕ:08.02.2007.

5) ಶ್ರೀ ಎಸ್. ಪ್ರಕಾಶ್‌ರವರ ರಕ್ಷಣಾ ಹೇಳಿಕೆ ದಿನಾಂಕ:23.03.2007.

ಪ್ರಸ್ತಾವನೆ:

ಶ್ರೀ ಎಸ್. ಪ್ರಕಾಶ್, ದ್ವಿತೀಯ ದರ್ಜೆ ಸಹಾಯಕರು ಹಾಲಿ ತಹಶೀಲ್ದಾರ್ ಕಛೇರಿ, ಕೆ.ಆರ್. ನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹುಣಸೂರು ಕಛೇರಿಯಿಂದ ನಿಯೋಜನೆ ಮೇಲೆ ಭೂದಾಖಲೆಗಳ ಸಹಾಯಕ ನಿರ್ದೇಶಕರು ಮದ್ದೂರು ಮರು ಭೂಮಾಪನ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:17.01.2004 ರಿಂದ 21.07.2004 ರವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಸದರಿ ಗೈರು ಹಾಜರಿಗೆ ಸಕ್ಷಮ ಪ್ರಾಧಿಕಾರಿಯಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆಯದೆ ಅನಧಿಕೃತ ಗೈರು ಹಾಜರಾತಿ ಆಗಿರುವ ಕಾರಣ, ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11ರನ್ವಯ ನೋಟೀಸನ್ನು ದಿನಾಂಕ:17.01.2005 ರಂದು ಜಾರಿ ಮಾಡಿರುತ್ತಾರೆ.

ಶ್ರೀ ಎಸ್. ಪ್ರಕಾಶ್ (ಇನ್ನು ಮುಂದೆ ಈ ನಡವಳಿಯಲ್ಲಿ ಆರೋಪಿತ ನೌಕರರೆಂದು ಕರೆಯಲಾಗಿದೆ) ರವರ ಮೇಲಿನ ಆರೋಪಗಳನ್ನು ಈ ಕೆಳಕಂಡಂತೆ ಪುನರುಚ್ಚರಿಸಿದೆ.

ಭೂ ದಾಖಲೆಗಳ ಸಹಾಯಕ ನಿರ್ದೇಶಕರು, ಹುಣಸೂರು ಕಛೇರಿಯಿಂದ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮದ್ದೂರು ಮರು ಭೂಮಾಪನ ಕಛೇರಿಯಲ್ಲಿ ನಿಯೋಜನೆಯ ಮೇಲೆ ಕೆಲಸ ನಿರ್ವಹಿಸುತ್ತಿರುವ ಶ್ರೀ ಎಸ್. ಪ್ರಕಾಶ್, ದ್ವಿತೀಯ ದರ್ಜೆ ಸಹಾಯಕರಾದ ನೀವು ದಿನಾಂಕ:17.01.2004 ರಿಂದ 21.07.2004 ರವರೆಗೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ. ಈ ನಿಮ್ಮ ಗೈರು ಹಾಜರಿಗೆ ಸಕ್ಷಮ ಪ್ರಾಧಿಕಾರಿಯವರಿಂದ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲೀ ಪಡೆದಿರುವುದಿಲ್ಲ. ಸರ್ಕಾರಿ ನೌಕರರಾದ ನೀವು ಈ ರೀತಿಯಾಗಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದು ನಿಯಮ ಬಾಹಿರವಾಗಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 106ಎ ಪ್ರಕಾರ ದುರ್ನಡತೆ ಎಸಗಿದಂತಾಗಿರುತ್ತದೆ. ಅಲ್ಲದೆ, ಈ ನಿಮ್ಮ ಅನಧಿಕೃತ ಗೈರು ಹಾಜರಿಯು 4 ತಿಂಗಳು ಮೀರಿದ್ದು, ಇದೇ ನಿಯಮಾವಳಿಯ ನಿಯಮ 108ನ್ನು ಆಕರ್ಷಿಸಿರುವುದರಿಂದ ಶಿಸ್ತು ಕ್ರಮ ಜರುಗಿಸಲು ಅವಕಾಶ ಮಾಡಿ, ಈ ಆರೋಪಕ್ಕೆ ಗುರಿಯಾಗಿರುತ್ತೀರಿ.

ಮೇಲಿನ ದೋಷಾರೋಪಣೆಯನ್ನು ನೋಟೀಸಿನೊಂದಿಗೆ ಆರೋಪಿತ ನೌಕರರು ದಿನಾಂಕ:08.03.2005 ರಂದು ಸ್ವೀಕರಿಸಿ ಈ ಬಗ್ಗೆ ಯಾವುದೇ ಬರಹ ಹೇಳಿಕೆಯನ್ನು ಸಲ್ಲಿಸದೆ ಅವರ ಮೇಲಿನ ಆರೋಪಗಳನ್ನು ಒಪ್ಪದೇ ಇದ್ದ ಕಾರಣ, ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯಲು ಈ ಕಛೇರಿ ನಡವಳಿ ದಿನಾಂಕ:30.01.2006ರಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಕೇಂದ್ರ ಕಛೇರಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಗಳನ್ನು ನೇಮಕ ಮಾಡಿದಂತೆ ಅವರು ವಿಚಾರಣೆ ನಡೆಸಿ, ತಮ್ಮ ಅಭಿಪ್ರಾಯದೊಂದಿಗೆ ವಿಚಾರಣಾ ವರದಿಯನ್ನು ದಿನಾಂಕ:27.11.2006 ರಂದು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಆಪಾದಿತರು ವಿಚಾರಣೆಗೆ ಹಾಜರಾಗಲು ಅನೇಕ ಅವಕಾಶಗಳನ್ನು ನೀಡಿದ್ದರೂ ಸಹ ವಿಚಾರಣೆಗೆ ಹಾಜರಾಗದೆ ಸತತವಾಗಿ ಗೈರು ಹಾಜರಾದ ಕಾರಣ, ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ ಆರೋಪಿತರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿದೆ ಎಂದು ನೀಡಿರುವ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ವಿಚಾರಣಾ ವರದಿಯ ಪ್ರತಿಯೊಂದಿಗೆ ನೇ ಕಾರಣ ಕೇಳಿ ನೋಟೀಸನ್ನು ದಿನಾಂಕ:08.02.2007ರಂದು ಕಳುಹಿಸಿರುವುದನ್ನು ಆರೋಪಿತ ನೌಕರರು ದಿನಾಂಕ:19.02.2007ರಂದು ಸ್ವೀಕರಿಸಿ ದಿನಾಂಕ:23.03.2007ರಂದು ಬರಹ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆರೋಪಿತ ನೌಕರರು ನೀಡಿರುವ ಬರಹ ಹೇಳಿಕೆಯಲ್ಲಿನ ಅಂಶಗಳನ್ನು ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ಮತ್ತು ಪೂರಕ ದಾಖಲಾತಿಗಳೊಂದಿಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಪಾದಿತರಾದ ಶ್ರೀ ಎಸ್. ಪ್ರಕಾಶ್ ದ್ವಿತೀಯ ದರ್ಜೆ ಸಹಾಯಕರವರು 6 ತಿಂಗಳ ಮೇಲ್ಪಟ್ಟ ಅವಧಿಗೆ ಅನಧಿಕೃತ ಗೈರು ಹಾಜರಾಗಿ ಕರ್ತವ್ಯ ಲೋಪವೆಸಗಿರುವುದು ಕರ್ನಾಟಕ ಸರ್ಕಾರಿ ಸೇವೆ ನಿಯಮಾವಳಿ 1958ರ ನಿಯಮ 108ರ ಮೇರೆಗೆ ಸರ್ಕಾರವು ಸಂದರ್ಭದ ವಿಶೇಷ ಸನ್ನಿವೇಶಗಳನ್ನು ಗಮನಿಸಿ ಅನ್ಯಥಾ ನಿರ್ಧರಿಸದ ಹೊರತು ರಜೆ ಪಡೆಯದೆ 4 ತಿಂಗಳು ಅಥವಾ ಅದಕ್ಕೂ ಹೆಚ್ಚು ಅವಧಿಯವರೆಗೆ ಕರ್ತವ್ಯದಿಂದ ಗೈರು ಹಾಜರಾದ ನೌಕರರು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರಲ್ಲಿ ವಿಧಿಸಲಾದ ಕಾರ್ಯವಿಧಾನವನ್ನು ಅನುಸರಿಸಿದ ತರುವಾಯ ತನ್ನನ್ನು ವಜಾ ಮಾಡುವುದಕ್ಕೆ ಅಥವಾ ತೆಗೆದುಹಾಕುವುದಕ್ಕೆ ಗುರಿಯಾಗಬಹುದಾಗಿದೆ. ಅದರಂತೆ ಈ ಪ್ರಕರಣದಲ್ಲಿ ಆರೋಪಿತ ನೌಕರರು ದಿನಾಂಕ:17.01.2004 ರಿಂದ 21.07.2004ರವರೆಗೆ ಅನಧಿಕೃತ ಗೈರು ಹಾಜರಾತಿ ಆಗಿರುವ ಅಂಶವು ಸಾಬೀತಾಗಿರುತ್ತದೆ. ಆ ಕಾರಣ, ಡಾ: ಬಾಬುರಾವ್ ಮುಡಬಿ, ಭಾ.ಆ.ಸೇ. ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 9(iii) ಮತ್ತು ನಿಯಮ 8(vii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಪ್ರಕಾಶ್, ದ್ವಿತೀಯ ದರ್ಜೆ ಸಹಾಯಕರು, ತಹಶೀಲ್ದಾರ್ ಕಛೇರಿ, ಕೆ.ಆರ್. ನಗರ ಇವರಿಗೆ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.862

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕರು ದಕ್ಷಿಣ ಕನ್ನಡ ಉಪ ವಿಭಾಗ–2 ಬೆಂದೂರ್‌ವೆಲ್ ವೃತ್ತ, ಕಂಕನಾಡಿ, ಮಂಗಳೂರು–2 ಇವರ ನ್ಯಾಯಾಲಯ**
**ಸಂಖ್ಯೆ: ಡಬ್ಲ್ಯೂಸಿಎ/ ಎಸ್‌ಆರ್–34/ 2007 (ಎಫ್)., ದಿನಾಂಕ:25ನೇ ಜೂನ್, 2007**

ಅರ್ಜಿದಾರರು: ವಿರುದ್ಧ ಪ್ರತಿವಾದಿಗಳು

1) ಶ್ರೀಮತಿ ರುತೀಯಾ ಮೃತ ಅಬೂಬಕ್ಕರರವರ ಮಡದಿ, 51ಎ, ನರಿಕೊಂಬು ವಿಲೇಜ್ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.
2) ಶ್ರೀಮತಿ ಫೃತಾ ಅಲಿಯಾಸ್ ಬೀಪಾತಾಮಾ ಜಿಯ್ಯಾ ಪ್ಯಾರಿಯವರ ಮಡದಿ, ಪದಂಗಡಿ ವಿಲೇಜ್ ಮತ್ತು ಅಂಚೆ, ಬೆಳ್ತಂಗಡಿ ತಾಲ್ಲೂಕು.
3) ಶ್ರೀಮತಿ ಬೀಪಾತಾಮಾ ಸುಲೈಮಾನರವರ ಮಡದಿ, ನರಿಕೊಂಬು ವಿಲೇಜ್ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು.

1) ಚಂದ್ರ ಪ್ರಕಾಶ್ ಶೆಟ್ಟಿ, ಮೃತ ತಂಕು ಶೆಟ್ಟಿಯವರ ಮಗ ತುಂಟೆ ಗುತ್ತು ಹೌಸ್, ತುಂಟೆ ಪೋಸ್ಟ್, ಬಂಟ್ವಾಳ ತಾಲ್ಲೂಕು.
2) ಬ್ರಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಯುಟಿ ಪ್ಲಾಜಾ, ಬಲ್ಮಠ ರೋಡ್, ಹಂಪನಕಟ್ಟೆ, ಮಂಗಳೂರು.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರುತೀಯಾ ಮತ್ತು ಇತರರು ಇವರು ತಮ್ಮ ಗಂಡನಾದ ಶ್ರೀ ಅಬೂಬಕರ್ ಇವರು 1ನೇ ಪ್ರತಿವಾದಿಗಳಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:04.11.2006 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ತಿಳಿಸಿ, ಅವಲಂಬಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆಯು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ–2, ಮಂಗಳೂರು.

ಪಿ.ಆರ್.861

**PUBLIC NOTICE**
**DAN SERVICES (INDIA) PRIVATE LIMITED**
**(formerly MRO Marketing Private Limited)**
**Regd Off: Bellary Road, Hebbal, Bangalore-560 024**
**NOTICE**

Notice pursuant to Section 485 of the Companies Act, 1956, is hereby given for general information, that the members of DAN Services (India) Private Limited, at an Extraordinary General Meeting of the company held, on 4th October, 2007, at its Registered office of the Company at Bellary Road, Hebbal, Bangalore-560 024, have passed the following Special Resolution to wind up the above said Company by members voluntary winding up.

"RESOLVED that the Company be wound up voluntarily, pursuant to section 484(1)(b) of the said Act, and that the Board of Directors be and are hereby empowered with all requisite authority for this purpose".

Place: Bangalore
Date:23.10.2007

for DAN Services (India) Private Limited
**VIJAYAKRISHNA K.T.**
Liquidator.

**FORM NO.151**
**(The Companies Act, 1956) (See Rule 315)**
**Members Voluntary Winding Up**
**Notice of Appointment of Liquidator pursuant to Section 516**

| | |
|---|---|
| Name of the Company | : DAN Services (India) Private Limited (formerly MRO Marketing Private Limited) |
| Nature of business | : Computers and Peripherals |
| Address of Reg. Office | : Bellary Road, Hebbal Road, Bangalore-560024. |
| Name & Address of Liquidator: | : Vijayakrishna K.T. Practicing Company Secretary, No.3, First Floor, 2nd Main, Vasanthanagar, Bangalore-52 |
| Date of appointment | : At EGM held on 22.10.2007 |
| By whom appointed | : By the members of the Company |

Place: Bangalore
Date:23.10.2007

**VIJAYAKRISHNA K.T.**
Liquidator.

PD-120

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ: ಶ್ರೀಮತಿ ಹೇಮಾವತಿ ಕೋಂ ಚಂದ್ರಹಾಸನ ರವರು ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005ರಲ್ಲಿ **1–ಬಾಗೀವಾಳು ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿ ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸದಿರುವುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಪ್ರಕಾರ ಅನರ್ಹಗೊಳಿಸುವ ಬಗ್ಗೆ.

**ಉಲ್ಲೇಖ:** 1) ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ(2)45/ 2005–06, ದಿನಾಂಕ:**02.03.2006.**

2) ಆಯೋಗದ ನೋಟೀಸು ಸಂಖ್ಯೆ: ರಾಚುಆ/ 152/ ಟಿಜಡ್‌ಪಿ/ 2005, ದಿನಾಂಕ:**01.04.2006.**

3) ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ರವರ ಪತ್ರ ಸಂಖ್ಯೆ: ಚುನಾವಣೆ(2) 45/2005–06, ದಿನಾಂಕ:**23.08.2007.**

ಪ್ರಸ್ತಾವನೆ:

**ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ 1–ಬಾಗೀವಾಳು ತಾಲ್ಲೂಕು ಪಂಚಾಯತಿ** ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ (ಪ್ರಪತ್ರ–10 ರಂತೆ) **ಶ್ರೀಮತಿ ಹೇಮಾವತಿ ಕೋಂ ಚಂದ್ರಹಾಸನ** ರವರು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಬಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ನಿಯಮಗಳು 2005ರ ನಿಯಮ 2 ಮತ್ತು ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 3ರ ಪ್ರಕಾರ, ಚುನಾವಣಾ ವೆಚ್ಚಗಳ ಲೆಕ್ಕ ಪತ್ರವನ್ನು ನಿಗದಿತ ನಮೂನೆಯಲ್ಲಿ ಚುನಾವಣಾ ಫಲಿತಾಂಶ ಘೋಷಿತವಾದ 30 ದಿನಗಳೊಳಗೆ ಸಲ್ಲಿಸಿರುವುದಿಲ್ಲವೆಂದು **ಹಾಸನ** ಜಿಲ್ಲೆಯ ಜಿಲ್ಲಾಧಿಕಾರಿಗಳು ಉಲ್ಲೇಖ (1)ರ ಪತ್ರದಲ್ಲಿ ವರದಿ ಮಾಡಿರುತ್ತಾರೆ.

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಹಾಗೂ ಕರ್ನಾಟಕ ಪಂಚಾಯತ್ ರಾಜ್ (ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳ ವೆಚ್ಚ ಮಿತಿ) ಆದೇಶ 2005ರ ಖಂಡ 6ರ ಉಪಖಂಡ 5ರನ್ವಯ ಆಯೋಗದಿಂದ ಉಲ್ಲೇಖ (2)ರಂತೆ ದಿನಾಂಕ:**01.04.2006ರ** ನೋಟೀಸನ್ನು ಅಭ್ಯರ್ಥಿಗೆ ನೀಡಿ ಅವರನ್ನು ಏಕೆ ಅನರ್ಹಗೊಳಿಸಬಾರದು ಎಂಬುದಕ್ಕೆ ನೋಟೀಸು ತಲುಪಿದ 20 ದಿನಗಳೊಳಗಾಗಿ ರಾಜ್ಯ ಚುನಾವಣಾ ಆಯೋಗಕ್ಕೆ ಕಾರಣಗಳನ್ನು ಸಲ್ಲಿಸತಕ್ಕದೆಂದು ತಿಳಿಸಲಾಗಿತ್ತು.

ಮೇಲ್ಕಂಡ ನೋಟೀಸನ್ನು ಜಾರಿ ಮಾಡಿಸಿ, ಜಿಲ್ಲಾಧಿಕಾರಿಗಳು ಜಾರಿಯಾದ ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ. ಆದಾಗ್ಯೂ ಅಭ್ಯರ್ಥಿಯು ಆಯೋಗಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಹಾಗೂ ಉಲ್ಲೇಖ (3)ರ ಜಿಲ್ಲಾಧಿಕಾರಿಗಳ ವರದಿಯಲ್ಲಿಯೂ ಸಹ ಸದರಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ವಿವರಗಳನ್ನು ಸಲ್ಲಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಲಾಗಿ ಅಭ್ಯರ್ಥಿಯು ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆಗಳು ಇರುವುದಿಲ್ಲವೆಂದು ದೃಢಪಟ್ಟಿರುತ್ತದೆ. ಕಾರಣ ಈ ಕೆಳಕಂಡಂತೆ ಆದೇಶ.

**ಆದೇಶ ಸಂಖ್ಯೆ: ರಾಚುಆ/ 184 (01)/ ಟಿಜಡ್‌ಪಿ 2007, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2007**

ಮೇಲೆ ವಿವರಿಸಿರುವಂತೆ **ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು ಪಂಚಾಯತಿ ಸದಸ್ಯ ಸ್ಥಾನಕ್ಕೆ 1–ಬಾಗೀವಾಳು ತಾಲ್ಲೂಕು** ಪಂಚಾಯತಿ ಚುನಾವಣಾ ಕ್ಷೇತ್ರದಿಂದ ಸಾರ್ವತ್ರಿಕ ಚುನಾವಣೆ 2005ರಲ್ಲಿ ಸ್ಪರ್ಧಿಸಿದ್ದ **ಶ್ರೀಮತಿ ಹೇಮಾವತಿ ಕೋಂ ಚಂದ್ರಹಾಸನ** ಇವರು, ಚುನಾವಣಾ ವೆಚ್ಚದ ಲೆಕ್ಕ ಪತ್ರಗಳನ್ನು ಸಲ್ಲಿಸದೇ ಇರುವುದಕ್ಕೆ ಸರಿಯಾದ ಕಾರಣ ಅಥವಾ ಸಮರ್ಥನೆ ಇಲ್ಲವೆಂದು ದೃಢಪಟ್ಟಿರುವುದರಿಂದ ರಾಜ್ಯ ಚುನಾವಣಾ ಆಯೋಗವು ಅವರನ್ನು ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ 1993ರ ಪ್ರಕರಣ 308–ಸಿ ಅನುಸಾರ ಈ ಆದೇಶದ ದಿನಾಂಕದಿಂದ ಆರು ವರ್ಷಗಳ ಅವಧಿಗೆ ಅನರ್ಹರೆಂದು ಘೋಷಿಸಿರುತ್ತದೆ.

**ಮ.ರಾ. ಹೆಗಡೆ**
ಆಯುಕ್ತರು,
ರಾಜ್ಯ ಚುನಾವಣಾ ಆಯೋಗ.

**ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ನಡವಳಿಗಳು**

**ವಿಷಯ: ಶ್ರೀ ಬಿ.ಕೆ. ರಾಮಚಂದ್ರ ಬಿನ್ ಕರೀಗೌಡ,** ರವರು **ಹಾಸನ ಜಿಲ್ಲೆ, ಹೊಳೆನರಸೀಪುರ ತಾಲ್ಲೂಕು ಪಂಚಾಯತಿ** ಸಾರ್ವತ್ರಿಕ ಚುನಾವಣೆ–2005ರಲ್ಲಿ **2–ಬಿದರಕ್ಕ ತಾಲ್ಲೂಕು ಪಂಚಾಯತಿ** ಚುನಾವಣಾ

